ಪ್ರಚಾರ ಪುಸ್ತಕ ಮಾಲೆ

225

# ಫಿನ್ಲೇ ಮೋರ್ಸ್

ಬಿ. ಎಸ್. ಮಯೂರ



ಪ್ರಚಾರ ಪುಸ್ತಕ ಮಾಲೆ-೨೨೫

# ಫಿನ್ಲೀ ಮೋರ್ಸ್

ಬಿ. ಎಸ್ ಮಯೂರ




೧೯೭೯

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೋಕೇಷನ್' ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚ ಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳ ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ,

ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವ ವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋ ದಯವನ್ನುಂಟುಮಾಡಿ, ದುಃಖಕ್ಕೆ ಮೂಲ ಕಾರಣವಾದ ಅಸ ಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸವನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತ ವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತ

ಇನ್ನೂರ ಇಪ್ಪತ್ತನಾಲ್ಕು ಪುಸ್ತಕಗಳು ಪ್ರಕಟವಾಗಿವೆ ಎಂಬು ದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಶ್ರೀಮತಿ ಮಯೂರ ಅವರ 'ಫಿನ್ಲೇ ಮೋರ್ಸ್' ಇದೀಗತಾನೆ ಈ ಮಾಲೆಯಲ್ಲಿ ಹೊರಬರುತ್ತಿದೆ. ಇದು ಹೆಚ್ಚು ಜನಪ್ರಿಯವಾಗಲೆಂದು ಆಶಿಸುತ್ತೇನೆ.

ಕೆ. ಎಸ್. ಹೆಗ್ಡೆ

ಕುಲಪತಿ

# ಅರಿಕೆ

ಇಂದು ನಮ್ಮ ಜೀವನದಲ್ಲಿ 'ಟೆಲಿಗ್ರಾಫ್' ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಅಂಚೆ ಕಛೇರಿಗಳಲ್ಲಿ, ರೈಲ್ವೆ ನಿಲ್ದಾಣಗಳಲ್ಲಿ ಅದರ ಟಿಕ್ ಟಿಕ್‌ನಾದ ಕೇಳಿಬರುತ್ತಲೇ ಇರುತ್ತದೆ. ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ನೋವು ನಲಿವು ಅಚ್ಚರಿ ಎಚ್ಚರಿಕೆಗಳ ಸುದ್ದಿಯನ್ನು ಬಿತ್ತರಿಸುತ್ತಿರುತ್ತದೆ. ಅಂತಹ ಮಹತ್ವಪೂರ್ಣ ತಂತಿ ಸುದ್ದಿ ವಾಹಕವನ್ನು ಕಂಡುಹಿಡಿದವನು ಫಿನ್ಲೆಮೋರ್ಸ್. ಈ ಪುಸ್ತಕ ದಲ್ಲಿ ಅವನ ಸಾಧನೆ ಸಿದ್ಧಿ ಸೋಲು ಗೆಲುವು ನೋವು ನಲಿವುಗಳ ಬದುಕಿನ ಚಿತ್ರಣ ಕೊಟ್ಟಿದೆ. ಅವನ ಬದುಕು ನಮ್ಮೆಲ್ಲರಿಗೂ ಸ್ಫೂರ್ತಿದಾಯಕವಾಗಲಿ ಎಂದು ಆಶಿಸಿದೆ.

ಈ ಪುಸ್ತಕವನ್ನು ಪ್ರಕಟಿಸಿದ ಮೈಸೂರು ವಿಶ್ವವಿದ್ಯಾ ನಿಲಯದ ಪ್ರಸಾರಾಂಗದವರಿಗೂ, ಅಚ್ಚುಮಾಡಿದ ವಿಶ್ವವಿದ್ಯಾ ನಿಲಯ ಮುದ್ರಣಾಲಯದವರಿಗೂ, ಸಹೃದಯತೆಯಿಂದ ಫಿನ್ಲೆ ಮೋರ್ಸ್‌ನ ಸಾಧನೆ ಸಿದ್ಧಿಗಳನ್ನು ಕೇಳಿದ ಮೂಡುಬಿದರೆಯ ಶ್ರೋತೃಗಳಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಮಹಾರಾಣಿಯವರ ವಿಜ್ಞಾನ ಕಾಲೇಜು
ಮೈಸೂರು

ಬಿ. ಎಸ್. ಮಯೂರ



ಫಿನ್ಲೆ ಮೋರ್ಸ್, 1884 ರಲ್ಲಿ, ಮೊದಲ ತಂತಿ ಸಂದೇಶವನ್ನು
ಕಳುಹಿಸಲು ಉಪಯೋಗಿಸಿದ ಯಂತ್ರದ ಮಾದರಿ

# ಫಿನ್ಲೆ ಮೋರ್ಸ್

೧

ಈಗ ನಮಗೆಲ್ಲ ತಂತಿ ಸುದ್ದಿ ಎಂದರೆ ಬಹಳ ಸಾಮಾನ್ಯವಾಗಿದೆ. ಆದರೆ ಹಿಂದೆ ಹೊತ್ತಲ್ಲದ ಹೊತ್ತಿನಲ್ಲಿ ಬರುವ ತಂತಿ ಎಂದರೆ ಭಯಪಡುತ್ತಿದ್ದವರೇ ಹೆಚ್ಚು. ಈಗಾದರೆ ಊರು ಬಿಟ್ಟಿದ್ದಕ್ಕೆ ಒಂದು ತಂತಿ, ಊರು ತಲುಪಿದ್ದಕ್ಕೆ ಒಂದು ತಂತಿ—ಓಡಾಡಲೇ ಬೇಕು—ಅಂದರೆ ಸುದ್ದಿ ತಂತಿಯ ಮೇಲೆ ಕುಣಿಯುತ್ತಾ ನೆಗೆಯುತ್ತಾ ಬರಲೇ ಬೇಕು!

18ನೆಯ ಶತಮಾನದಲ್ಲಿ, ಈ ಬಗ್ಗೆ ತಿಳಿದವರೇ ಇರಲಿಲ್ಲ. ಪ್ರಸಿದ್ಧ ಚಿತ್ರಕಲಾವಿದ—ಸ್ಯಾಮ್ಯುಯಲ್ ಬ್ರೀಸ್ ಫಿನ್ಲೆ ಮೋರ್ಸ್—ಇದನ್ನು ಕಂಡುಹಿಡಿದ. ಅವನು ರೂಪಿಸಿದ ವಿಧಾನ ಇಂದಿಗೂ ರೈಲ್ವೆ ನಿಲ್ದಾಣಗಳಲ್ಲಿ ಅಂಚೆಕಛೇರಿಗಳಲ್ಲಿ ಬಳಕೆಯಾಗುತ್ತಿದೆ.

ಫಿನ್ಲೆ ಮೋರ್ಸ್ ಪುರೋಹಿತರ ಕುಟುಂಬದಲ್ಲಿ ಹುಟ್ಟಿದ ಹಿರಿಯಮಗ. ಕನಸು ಕಾಣುತ್ತಾ ಕೂರುವುದೆಂದರೆ ಅವನಿಗೆ ಪರಮಾನಂದ. ಜೊತೆಗೆ ಚಟುವಟಿಕೆಯೂ ಇತ್ತು. ಶಾಲೆಯಲ್ಲಿ ಕೂತಿರಲೇ ಬೇಕಾದಾಗ ಕನಸುಕಾಣುತ್ತಾ ಮನಸ್ಸಿಗೆ ತೋರಿದ ಚಿತ್ರ ಬಿಡಿಸುತ್ತಾ ಕುಳಿತಿರುತ್ತಿದ್ದ. ಶಾಲೆ ಬಿಟ್ಟ ಮೇಲೆ, ಯಾವ ಅಡ್ಡಿಯೂ ಇಲ್ಲದ ವಾತಾವರಣದಲ್ಲಿ, ಸ್ವೇಚ್ಛೆಯಾಗಿ ಆಡುತ್ತಾ ಕುಣಿಯುತ್ತಾ ಕಾಲಕಳೆಯುತ್ತಿದ್ದ.

ಒಮ್ಮೆ ಪ್ರಾಥಮಿಕ ಶಾಲೆಯಲ್ಲಿ ಪದ್ಯದ ಪಠಣ ನಡೆಯುತ್ತಿತ್ತು. ಪುಸ್ತಕದಲ್ಲಿದ್ದ ಚಿತ್ರ ನೋಡುತ್ತಾ ನೋಡುತ್ತಾ ಅವನಿಗೆ ಸ್ಫೂರ್ತಿಬಂದಿತು. ಮೆಲ್ಲನೆ ಜರುಗಿಕೊಂಡು ಹೋಗಿ

ಮೇಡಂ ಹಿಂದಿದ್ದ ಬೀರುವಿನ ಮೇಲೆ ಅವರ ಚಿತ್ರವನ್ನು ಬಿಡಿಸಿದ
ಮುಗಿದ ಮೇಲೆ ಅವನೂ ಬೇರೆಯವರೊಂದಿಗೆ ದನಿಗೂಡಿಸಿದ
'ಅರೆ ಹಿಂದಿನಿಂದ ಯಾರು ಸದ್ಯ ಹೇಳುವವರು?' ಎಂದ
ಹಿಂತಿರುಗಿದ ಮೇಡಂ ಚಿತ್ರ ಕಂಡು ಅವನನ್ನು—ಪುಟ್ಟ ಫಿನ್ಲೆ
ಯನ್ನು—ಚೆನ್ನಾಗಿ ಥಳಿಸಿದರು. ಮುಗುಳ್ನಗೆ ಪ್ರಶಂಸೆಯನ್ನು
ನಿರೀಕ್ಷಿಸಿದ್ದ ಫಿನ್ಲೆ, ಚಿತ್ರ ಬರೆದ ಕೈಬಡ್ಡಿ ಪೆಟ್ಟು ತಿನ್ನ
ಬೇಕಾಯಿತು.

ತಂದೆ ಹೆಸರು ಪಡೆದ ಪುರೋಹಿತ. ನಾಲ್ಕು ಜನಕ್ಕೆ
ಬೇಕಾದವನು. ಅವನೊಡನೆ ಕಷ್ಟ ಸುಖ ಹೇಳಿಕೊಳ್ಳಲು ಜನರು
ಆಗಾಗ್ಗೆ ಬರುತ್ತಿದ್ದರು. ಸಹಜವಾಗಿ ಫಿನ್ಲೆಯನ್ನು ಮಾತ
ನಾಡಿಸುತ್ತಿದ್ದರು. ಹಿರಿಯರು ಸಾಮಾನ್ಯವಾಗಿ ಕೇಳುವ "ಮಗು
ಮುಂದೆ ನೀನೇನಾಗಬೇಕೆಂದಿದ್ದೀ?" ಎಂಬ ಪ್ರಶ್ನೆಗೆ ಅವನು
ಎಷ್ಟೋ ಬಾರಿ ಉತ್ತರಿಸಬೇಕಾಗುತ್ತಿತ್ತು. "ನಾನು ಚಿತ್ರಕಾರ
ನಾಗುವೆ" ಎಂದು ಅವನು ಹೇಳಿದಾಗಲೆಲ್ಲ ಪ್ರಶ್ನೆ ಕೇಳಿದವರು
ಆಶ್ಚರ್ಯ ಪಡುತ್ತಿದ್ದರು. "ಏಕಪ್ಪ ತಂದೆಯಂತೆ ಒಳ್ಳೆಯ
ವೇದಾಂತಿಯಾಗಿ ನಾಲ್ಕು ಜನಕ್ಕೆ ಬೇಕಾದವನಾಗಿ, ಸಂತೈಸಿ
ಉದ್ಧಾರಮಾಡುವ ಪಾದ್ರಿಯಾಗು. ನಿನ್ನ ಚಿತ್ರಕಲೆಯಿಂದ
ಯಾರಿಗೇನು" ಎನ್ನುತ್ತಿದ್ದರು. "ಹಿರಿಯ ಮಗನಾಗಿ ನೀನು
ಅಪ್ಪನ ವೃತ್ತಿಯನ್ನು ಅನುಸರಿಸಬೇಡವೇ?" ಎನ್ನುತ್ತಿದ್ದರು.
ಇದನ್ನೆಲ್ಲ ಕೇಳಿ ನೊಂದ ಫಿನ್ಲೆ ಅಮ್ಮನ ಹತ್ತಿರ ಹೋಗಿ "ಅಮ್ಮ
ನನಗೆ ಈ ಹಿರಿಯ ಮಗನ ಪಟ್ಟ ಸಾಕಾಯಿತು. ತಮ್ಮ ಆಲ್ಬರ್ಟ್
ನನ್ನು ನಿಮ್ಮ ಹಿರಿಯ ಮಗನನ್ನಾಗಿ ಮಾಡಿಕೊಳ್ಳಿ. ನಾನು ಚಿತ್ರ
ಕಾರನೇ ಆಗಬೇಕು. ಇನ್ನೇನೂ ಆಗುವುದಿಲ್ಲ" ಎಂದು ಬೇಡಿದ.
ಅವನ ಮನಸ್ಸನು ಅರ್ಥಮಾಡಿಕೊಂಡ ತಂದೆತಾಯಿ ಅವನಿಗೆ

ಎಲ್ಲ ಅನುಕೂಲಗಳನ್ನೂ ಮಾಡಿಕೊಟ್ಟರು. ಶಾಲೆಯಲ್ಲಿ ಅವನ ಓದು ಅವನ ಚಿತ್ರಕಲಾಭ್ಯಾಸ ನಡೆಯುತ್ತಿತ್ತು. ತನ್ನಿಚ್ಛೆ ಅರಿತ ತಂದೆಯೇ, ಅವನಿಗೆ ದೈವ; ತಾಯಿಯೇ ಸ್ಫೂರ್ತಿ; ತಮ್ಮಂದಿರೇ ಅವನ ಗೆಳೆಯರು. ಅವನ ಮನೆಯ ಸುತ್ತಲಿದ್ದ ಪ್ರಕೃತಿಯೇ ಅವನ ಗುರು. ಮಧ್ಯಮವರ್ಗ ಕುಟುಂಬದ ಅವನ ಜೀವನ ತೃಪ್ತಿಯಿಂದ ಸಂತೋಷದಿಂದ ನಡೆಯುತ್ತಿತ್ತು.

೨

ತಂದೆ, ತನ್ನ ಬಂಡವಾಳವನ್ನೆಲ್ಲ ಒಟ್ಟುಹಾಕಿ, ಫಿನ್ಲೆ ಯನ್ನು ಹೆಚ್ಚಿನ ಅಭ್ಯಾಸಕ್ಕಾಗಿ ಲಂಡನ್‌ಗೆ ಕಳುಹಿಸುವ ಏರ್ಪಾಡು ಮಾಡಿದ. ಅವನಿಗೆ ಉತ್ಸಾಹ ಸಂತೋಷದಷ್ಟೆ ದುಃಖವೂ ಆಯಿತು. ಮನೆಯವರನ್ನು ಬಿಟ್ಟು ಹೋಗುವುದೇ ಅವನಿಗೊಂದು ಶಿಕ್ಷೆ ಎನಿಸಿತು.

ಆಗಿನ ಕಾಲದ ವಿದೇಶ ಪ್ರಯಾಣ, ಸಮುದ್ರದ ಮೇಲೆ ಹಡಗಿನಲ್ಲಿ, ಮಾಡಬೇಕಾಗಿತ್ತು. ಸಮುದ್ರದ ರೂಪ, ಅದರ ಆರ್ಭಟ, ಅದರ ಚಟುವಟಿಕೆ ಎಲ್ಲ ಫಿನ್ಲೆಗೆ ಹೊಸ ಅನುಭವ. ನೀಲಾಕಾಶಕ್ಕೂ, ನೀಲವಾದ ಸಮುದ್ರಕ್ಕೂ ಮಧ್ಯದಲ್ಲಿ, ಪುಟ್ಟ ಹಡಗಿನಲ್ಲಿ ದಿನಗಟ್ಟಲೆ ಪ್ರಯಾಣಮಾಡುವ ಅನುಭವ ಅವನಿಗೆ ಬಹಳ ಅದ್ಭುತವಾಗಿ ಆಶ್ಚರ್ಯಕರವಾಗಿ ಇತ್ತು. ಆ ಅನುಭವ ವನ್ನೂ, ತನ್ನ ಮನಸ್ಸಿಗಾದ ಉಲ್ಲಾಸವನ್ನೂ ತಂದೆತಾಯಿಗೆ, ತಮ್ಮಂದಿರಿಗೆ ಹೇಳಬೇಕು ಎನಿಸಿತು. ಹೇಗೆ? ಲಂಡನ್ ತಲುಪಿದ ಮೇಲೆ, ಕಾಗದ ಬರೆಯಬೇಕು. ಅದು ಅವನಂತೆಯೇ ಆರುವಾರ ಗಳಕಾಲ ಹಡಗಿನಲ್ಲಿ ಪ್ರಯಾಣಮಾಡಿ, ಅದೆಷ್ಟೋ ದಿನ ಭೂಮಿಯಮೇಲೆ ಪ್ರಯಾಣಮಾಡಿ ತನ್ನವರನ್ನು ತಲುಪಬೇಕು.

ಛೆ! ಅಷ್ಟು ಹೊತ್ತಿಗೆ ಇವನು ಲಂಡನ್‌ನಲ್ಲಿ ಹಳಬನಾಗಿರುತ್ತಾನೆ.
ಬೇರೊಂದು ಶೀಘ್ರವಾದ ವಿಧಾನವಿರಬೇಕಾಗಿತ್ತು. ನಾನಿಲ್ಲಿ
ನೋಡುತ್ತಿರುವುದನ್ನು ವರ್ಣಿಸುತ್ತಿದ್ದರೆ ಅವರಿಗೆ ಅದು ಕೇಳಿಸಿ
ಚಿತ್ರವನ್ನು ರೂಪಿಸಿಕೊಂಡು ಅವರು ಸಂತೋಷಪಡುವಂತಿರ
ಬೇಕು, ಎನ್ನಿಸಿತು. ಅವನ ಅಂದಿನ ಅನಿಸಿಕೆ ಹಾಗೆಯೇ
ಉಳಿಯಿತು. ಅವನೀಗ ಚಿತ್ರಕಲೆಯ ಅಭ್ಯಾಸಕ್ಕೆ ಲಂಡನ್
ನಗರಕ್ಕೆ ಹೊರಟಿದ್ದ. ಅದಕ್ಕಾಗಿ ಅವನ ಮನೆಯವರು ಮಾಡಿದ್ದ
ಪ್ರಯತ್ನ, ಖರ್ಚುಮಾಡಿದ್ದ ಹಣ ಇವುಗಳ ನೆನಪಾಯಿತು.
ಜವಾಬ್ದಾರಿ ಕನಸನ್ನು ಹಿಂದಕ್ಕೆ ತಳ್ಳಿತು.

ಲಂಡನ್ ನಗರದ ಕಲಾಶಾಲೆಯಲ್ಲಿ ಅಷ್ಟು ಸುಲಭವಾಗಿ
ಅವನಿಗೆ ಪ್ರವೇಶ ಸಿಗಲಿಲ್ಲ. ಅವನೊಂದು ಚಿತ್ರ ಬರೆದು ಅಲ್ಲಿಯ
ನಿರ್ದೇಶಕರನ್ನು ಮೆಚ್ಚಿಸಬೇಕಾಗಿತ್ತು ತನ್ನ ಯಾತ್ರಿಕರ ಚಿತ್ರ
ತರಬೇಕಾಗಿತ್ತು ಎಂದುಕೊಂಡ. ಅದನ್ನು ನೋಡಿದ ಮೇಲೆ
ತಂದೆ ಅವನ ಕಲೆಗೆ ಪ್ರೋತ್ಸಾಹ ಕೊಡಲು ನಿಶ್ಚಯಿಸಿದ್ದ.
ತಂದೆಯನ್ನು ಮೆಚ್ಚಿಸಿದ ಚಿತ್ರ, ನಿರ್ದೇಶಕರನ್ನೂ ಮೆಚ್ಚಿಸು
ತ್ತಿತ್ತು. ಅವನಿಗೀಗ ಶಾಲೆ ಪ್ರವೇಶ ದೊರಕುತ್ತದೆಯೋ ಇಲ್ಲವೋ
ಎಂಬ ಚಿಂತೆ, ಆತಂಕ ಪ್ರಾರಂಭವಾಯಿತು.

ಕಲಾಶಾಲೆಯ ಅಧಿಕಾರಿ, ಶ್ರೀ ಆಲೆಸ್ಟನ್, ಅವನನ್ನು
ಭೆಟ್ಟಿಮಾಡಿದರು.

"ನಮ್ಮ ನಿರ್ದೇಶಕರಿಗೆ ಅಮೆರಿಕದ ತರುಣ ಕಲೆಗಾರ
ರೆಂದರೆ ಬಹಳ ಮೆಚ್ಚಿಗೆ. ನೀನು ಚಿತ್ರ ಬರೆದಮೇಲೆ ಒಮ್ಮೆ
ಅವರು ನೋಡುತ್ತಾರೆ. ಆಮೇಲೆ ನೀನು ಅದನ್ನು ಶಾಲೆಗೆ
ಕೊಡು. ಅಲ್ಲಿ ಎಲ್ಲ ಅಧಿಕಾರಿಗಳೂ ಅವಲೋಕಿಸಿ ನಿನ್ನ
ಪ್ರವೇಶದ ಬಗ್ಗೆ ನಿರ್ಧಾರ ಕೈಗೊಳ್ಳುತ್ತಾರೆ" ಎಂದಾಗ ಫಿನ್ಲೆ

ಮೋರ್ಸ್ ಸಂತಸಗೊಂಡ. ತನ್ನ ಪ್ರವೇಶ ಸುಗಮವಾಯಿತು ಎಂದು ಹರ್ಷಪಟ್ಟ.

ಮಾರನೆಯ ದಿನ ಅದೇ ಅಧಿಕಾರಿ, ಅವನಿಗೊಂದು ಪೆಟ್ಟಿಗೆ, ಒಂದು ಪುಸ್ತಕ ತಂದುಕೊಟ್ಟರು. ಪೆಟ್ಟಿಗೆಯಲ್ಲಿ ಹರ್‌ಕ್ಯುಲಿಸ್‌ನ ಪ್ರತಿಮೆ. ದಿವ್ಯವಾದ ಮೈಕಟ್ಟಿನ ಅವನ ಪ್ರತಿಮೆ, ನೋಡಲು ಎರಡುಕಣ್ಣು ಸಾಲದು ಎಂಬಂತಿತ್ತು. ಹರ್‌ಕ್ಯುಲಿಸ್‌ನ ಬಗ್ಗೆ ಬರೆದ ಪುಸ್ತಕವೂ ಜೊತೆಗಿತ್ತು. "ಇವನ್ನು ನಿರ್ದೇಶಕರು ನಿನಗೆ ಕಳುಹಿಸಿದ್ದಾರೆ. ಪುಸ್ತಕದಲ್ಲಿ ಅವನ ಬಗ್ಗೆ ಚನ್ನಾಗಿ ಓದಿಕೊಂಡು, ಈ ಪ್ರತಿಮೆಯನ್ನು ರೂಪದರ್ಶಿಯಾಗಿಟ್ಟುಕೊಂಡು, ಅವನ ಒಂದು ಚಿತ್ರ ಬರೆದುಕೊಟ್ಟರೆ, ಅದು ನಿರ್ದೇಶಕರಿಗೆ ಒಪ್ಪಿಗೆ ಯಾದರೆ, ನಿನಗೆ ಪ್ರವೇಶ ದೊರೆತಂತೆಯೇ" ಎಂದು ಅಧಿಕಾರಿ ಹೇಳಿದರು.

ಒಂದು ಸಾಮಾನ್ಯವಾದ ಕಪ್ಪು ಬಿಳುಪಿನ ಚಿತ್ರ ಬರೆಯಲು ಒಂದು ರೂಪದರ್ಶಿ, ಅವನ ಬಗ್ಗೆ ಪುಸ್ತಕ ಇವೆಲ್ಲ ಅನವಶ್ಯಕ ಎನಿಸಿತು ಫಿನ್ಲೆಗೆ. ಆದರೆ ಅಲ್ಲಿಯ ನಿಯಮ ಹಾಗೆಯೇ ಇತ್ತು. ಯಾವ ಚಿತ್ರ ಬಿಡಿಸಬೇಕಾದರೂ ಅದರ ಮಣ್ಣಿನ ಮೂರ್ತಿ ಯೊಂದು ಸಿದ್ಧವಾಗಬೇಕು. ಅನಂತರವೇ ಅದರ ಚಿತ್ರದ ಏರ್ಪಾಡು. ಅವನು ಅಲ್ಲಿ ಅಭ್ಯಾಸ ಮಾಡಬೇಕಾದರೆ ಆ ನಿಯಮ ವನ್ನು ಪಾಲಿಸಲೇ ಬೇಕಾಗಿತ್ತು. ಆಗ ವಿದ್ಯಾರ್ಥಿಗಳಿಗಾಗಿ ನಿಯಮ ಬದಲಿಸುವ ಕಾರ್ಯಕ್ರಮಗಳು ಇರಲಿಲ್ಲ.

ಪುಸ್ತಕ ಓದಿ ಹರ್‌ಕ್ಯುಲಿಸ್ ಬಗ್ಗೆ ತಿಳಿದುಕೊಂಡು, ಚಿತ್ರಬರೆಯಲು, ಅವನಿಗೆ, ಒಂದು ವಾರದ ಅವಕಾಶವಿತ್ತು. ಆದರೆ ಅವನ ಚಿತ್ರ ಒಂದು ದಿನಕ್ಕೇ ಸ್ಫುಟಗೊಂಡಿತು. ಊಟ ನಿದ್ರೆಗಳನ್ನು ಮರೆತು ಚಿತ್ರ ಮುಗಿಸಿ ಎದ್ದಾಗ, ಅವನಿಗೆ ಬಹಳ ತೃಪ್ತಿಯಾಗಿತ್ತು.

"ಸರಿಯಾಗಿದೆ, ಒಮ್ಮೆ ನಿರ್ದೇಶಕರಿಗೆ ತೋರಿಸು. ನೀನು
ಶಾಲೆಯ ಸಂಘದ ಮುಂದೆ ಅದನ್ನು ತೋರಿಸುವ ಮೊದಲು
ಅವರೊಮ್ಮೆ ನೋಡುತ್ತಾರಂತೆ" ಎಂದು ಅಧಿಕಾರಿ ಹೇಳಿದಾಗ
ಫಿನ್ಲೆ ಮೋರ್ಸ್‌ಗೆ ಬಹಳ ಹೆಮ್ಮೆ ಎನಿಸಿತು.

"ಎಲ್ಲ ಸರಿಯಾಗಿದೆ. ನೀನಿನ್ನು ಚಿತ್ರವನ್ನು ಪೂರ್ತಿಮಾಡಿ
ತರಬಹುದು" ಎಂದು ನಿರ್ದೇಶಕರು ನುಡಿದಾಗ, ಅವನಿಗೆ
ದಿಗ್ಭ್ರಮೆಯಾಯಿತು. ಆದರೂ, ಯಾವ ಮಾತನ್ನೂ ಆಡದೆ
ಚಿತ್ರವನ್ನು ಮನೆಗೆ ತಂದು ವೀಕ್ಷಿಸಿದ. ಪ್ರತಿಮೆಯೊಡನೆ ಹೋಲಿಸಿ
ನೋಡಿದ. ಪುಸ್ತಕ ಓದಿ, ಮತ್ತೊಮ್ಮೆ ಚಿತ್ರವನ್ನು ನೋಡಿದ.
'ಹೌದು ಅಲ್ಲಲ್ಲಿ ತಿದ್ದಬೇಕೆಂದು'ಕೊಂಡ. ಅವನ ಮನಸ್ಸಿನಂತೆ
ಚಿತ್ರ ರೂಪುಗೊಳ್ಳಲು ಒಂದು ವಾರವೇ ಬೇಕಾಯಿತು.

ನಿರ್ದೇಶಕರು ಮತ್ತೆ ಅವನ ಚಿತ್ರವನ್ನು ನೋಡಿ
"ಸರಿಯಾಗಿದೆ. ಇನ್ನು ಇದನ್ನು ಪೂರ್ಣಗೊಳಿಸಬಹುದು"
ಎಂದರು. ಫಿನ್ಲೆ ಮೋರ್ಸ್‌ಗೆ ಮಾತೇ ಹೊರಡಲಿಲ್ಲ. ತನ್ನ
ಕೋಣೆಯಲ್ಲಿ ಕುಳಿತು ತನ್ನವರನ್ನು ನೆನೆಸಿಕೊಳ್ಳತೊಡಗಿದ. ಚಿತ್ರ
ಶಾಲೆಗೆ ಪ್ರವೇಶ ದೊರೆಯಬೇಕಾದರೆ, ನಿರ್ದೇಶಕರು ಒಪ್ಪುವಂತೆ
ಚಿತ್ರ ತಯಾರಾಗಲೇಬೇಕು. ಪುನಃ ಚಿತ್ರದ ಮುಂದೆ ಕುಳಿತ.
ಅದರ ಮುಂದೆ, ಅಲ್ಲೊಂದು ಇಲ್ಲೊಂದು ಗೆರೆ ಎಳೆಯುತ್ತಾ
ಒಂದುವಾರ ಕುಳಿತ. ಹರ್‌ಕ್ಯುಲಿಸ್‌ನ ಚಿತ್ರ ಹೆಚ್ಚು ಸ್ಪಷ್ಟ
ವಾದಾಗ ಅವನಿಗೇ ಆಶ್ಚರ್ಯವಾಯಿತು!

ಈ ಬಾರಿ ನಿರ್ದೇಶಕರು "ಪೂರ್ಣಗೊಳಿಸು" ಎಂದಾಗ
"ಅದು ಪೂರ್ತಿಯಾಗಿದೆ. ಇನ್ನೇನಿಲ್ಲ" ಎಂದು ಧೈರ್ಯಮಾಡಿ
ಹೇಳಿಯೇ ಬಿಟ್ಟ.

"ಇಲ್ಲಿ ಒಂದು ಗೆರೆ ಬಂದರೆ ಹೇಗೆ? ಅಲ್ಲಿ ಸ್ವಲ್ಪ ಕಪ್ಪು
ದಟ್ಟವಾದರೆ ಹೇಗೆ?" ಎಂದು ಅವರು ನಾಲ್ಕೈದು ಕಡೆ ತೋರಿಸಿ

ದಾಗ ಮೋರ್ಸ್ ಒಪ್ಪಿಕೊಳ್ಳಲೇಬೇಕಾಯಿತು. ಅವನಿಗೀಗ ಚಿತ್ರದ ಪೂರ್ಣ ಸ್ವರೂಪ ಕಂಡಿತು. ಮುಂದಿನವಾರ ನಿರ್ದೇಶಕರು ಅವನ ಚಿತ್ರವನ್ನು ಮೆಚ್ಚಿಕೊಂಡಾಗ, ಅವನಿಗೆ ಸಂತಸಕ್ಕಿಂತ ಅಧಿಕವಾಗಿ ತೃಪ್ತಿಯಾಗಿತ್ತು. ಚಿತ್ರ ಪಾಠದ ನೆಪದಲ್ಲಿ, ನಿರ್ದೇಶಕರು ಅವನಿಗೆ ಸಹನೆಯ ಪಾಠವನ್ನು ಕಲಿಸಿದ್ದರು. ಏನಾದರೊಂದು ಗುರಿ ಸಾಧನೆಗೆ ಪ್ರತಿಭೆಯ ಜೊತೆಗೆ ಸಹನೆಯೂ ಅವಶ್ಯ ಎಂಬುದು ತಿಳಿಯಿತು. ಶಾಲೆಯಲ್ಲಿ ಓದುವಾಗ, ಎಲ್ಲದಕ್ಕೂ ತಾನು ಬಲು ಅವಸರ ಪಡುತ್ತಿದ್ದಾಗ ತಂದೆ ಹೇಳುತ್ತಿದ್ದ ಆಮೆ ಮತ್ತು ಮೊಲದ ಕಥೆಯ ನೆನಪಾಯಿತು. ಅದೆಷ್ಟು ಬಾರಿ 'ತಾಳು', 'ನಿಧಾನಿಸು' ಎಂದು ಹೇಳುತ್ತಿದ್ದರು! ತಂದೆಗೆ ಇದನ್ನೆಲ್ಲ ಈ ಕ್ಷಣದಲ್ಲಿ ಹೇಳಬೇಕು ಎನ್ನಿಸಿತು. ಆದರೆ ಎಷ್ಟು ಅಂತರ! ತಾನು ಕಾಗದ ಬರೆದು ಅವರಿಗೆ ಅದು ತಲುಪುವ ವೇಳೆಗೆ, ತನ್ನ ಕಲಾಶಾಲೆಯ ಅಭ್ಯಾಸವೇ ಮುಗಿದುಹೋಗಿರ ಬಹುದು. ಅವನ 'ಅವಸರ' ಪುನಃ ಎಚ್ಚೆತ್ತಿತ್ತು.

ಅವನು ಇಂಗ್ಲೆಂಡಿಗೆ ಬಂದು ಆಗಲೇ ನಾಲ್ಕು ತಿಂಗಳು ಕಳೆದಿತ್ತು. ಅವನ ಚಿತ್ರಕಲಾಭ್ಯಾಸದ ಬಗ್ಗೆ ಅವನಿಗೇನೇನೂ ತೃಪ್ತಿ ಸಿಕ್ಕಿರಲಿಲ್ಲ. ಇನ್ನೂ ಕಲಿಯಬೇಕು, ಬೇಗ ಕಲಿಯಬೇಕು, ಬೇಗ ಊರಿಗೆ ಹಿಂತಿರುಗಬೇಕು. ಅವನು ಹಾಗೆ ಕನಸು ಕಾಣು ತ್ತಿರುವಂತೆಯೇ ಅಲ್ಲಿ ಯುದ್ಧ ಪ್ರಾರಂಭವಾಯಿತು. ಫ್ರಾನ್ಸಿನಲ್ಲಿ ನೆಪೋಲಿಯನ್ ಸರ್ವಾಧಿಕಾರ ನಡೆಸುತ್ತಾ ತನ್ನ ಜಾಲವನ್ನು ಇಂಗ್ಲೆಂಡಿಗೂ ಹರಡಲು ಪ್ರಯತ್ನನಡೆಸುತ್ತಿದ್ದ. ಇಂಗ್ಲೆಂಡಿನವರು ತಮ್ಮ ಯುದ್ಧದ ತಂತ್ರದಲ್ಲಿ, ಫ್ರಾನ್ಸಿಗೆ ಹೋಗುವ ಎಲ್ಲ ಹಡಗು ಗಳನ್ನು ತಡೆಯಲು ಆಜ್ಞಾಪಿಸಿದರು. ಇದರಿಂದ ಅಮೇರಿಕದ ಹಡಗುಗಳು ಇಂಗ್ಲೆಂಡಿನ ಬಂದರಿನಲ್ಲಿಯೇ ನಿಲ್ಲಬೇಕಾಯಿತು.

ಅಷ್ಟೇ ಅಲ್ಲದೆ, ಹಡಗಿನ ಕೆಲಸಗಾರರನ್ನು, ಇಂಗ್ಲೆಂಡಿನವರ
ಯುದ್ಧ ಕಾಲದಲ್ಲಿ ಬಳಸಿಕೊಳ್ಳಲಾರಂಭಿಸಿದರು. ಇದನ್ನು ತಿಳಿ
ಅಮೆರಿಕನ್ನರು, ಇಂಗ್ಲೆಂಡಿಗೆ ಎಚ್ಚರಿಕೆ ಇತ್ತರು. ಇಂಗ್ಲೆಂಡಿನವರ
ಶಾಸನ ಸಭೆಯಲ್ಲಿ ನಿರ್ಣಯ ತೆಗೆದುಕೊಂಡು, ತಮ್ಮ ಆಜ್ಞೆ
ಯನ್ನು ಹಿಂದಕ್ಕೆ ತೆಗೆದುಕೊಂಡರು. ಈ ಸುದ್ದಿ ಅಮೆರಿಕವನ
ತಲುಪುವುದರಲ್ಲಿ, ಅಲ್ಲಿಯ ಜನ ಸಿಟ್ಟುಗೊಂಡು, ಇಂಗ್ಲೆಂ
ನೊಡನೆ ಹೋರಾಡಲು ಪ್ರಾರಂಭಿಸಿಯೇ ಬಿಟ್ಟರು.

ಒಂದು ಸಂದೇಶ ಸಕಾಲದಲ್ಲಿ ತನ್ನ ಊರನ್ನು ತಲುಪಿದ್ದರೆ
ಎಷ್ಟು ಸಾವುನೋವುಗಳನ್ನು ತಡೆಯಬಹುದಾಗಿತ್ತು. ಹೀ
ಚಿಂತಿಸಿದ ಫಿನ್ಲೆಯ ಮನಸ್ಸಿಗೆ ಬಹಳ ನೋವಾಯಿತು. ಅವ
ಮನಸ್ಸಿನಲ್ಲಿ ಅಡಗಿದ್ದ 'ಶೀಘ್ರ ಸುದ್ದಿವಾಹಕ'ದ ಅವಶ್ಯಕ
ಮತ್ತೊಮ್ಮೆ ಕಾಣಿಸಿಕೊಂಡಿತು.

ಅವನಿಗೆ ಈಗ ಈ ನೋವನ್ನು ಮರೆಯಬೇಕಾಗಿತ್ತು.
ಅದಕ್ಕೆ ಕಲಾಶಾಲೆಯೇ ಸರಿಯಾದ ಸ್ಥಳ. ತನ್ನ ಗೆಳೆಯ
ನೊಡನೆ ಕಲಾಶಾಲೆಗೆ ನಡೆದ. ಉದ್ದಕ್ಕೂ ಯುದ್ಧದ ವಿಷಯ
ಚಿತ್ರದ ವಿಷಯ, ಅವರ ಅಧ್ಯಕ್ಷರು ಬರೆಯುತ್ತಿರುವ ಚಿತ್ರ
ವಿಷಯ ಎಲ್ಲದರ ಚರ್ಚೆಯೂ ನಡೆಯಿತು.

ಶಾಲೆಯಲ್ಲಿ, ಅವರ ಅಧಿಕಾರಿಯೊಬ್ಬರು, ತಾವು ಬರೆಯ
ಬೇಕಾದ ಚಿತ್ರದ, ಮಣ್ಣಿನ ಮೂರ್ತಿ ಮಾಡುತ್ತಿದ್ದರು.

"ಇದೊಂದು ಸಮಯ ತಿನ್ನುವ ಕೆಲಸ. ಮಣ್ಣಿನ ಪ್ರತಿಮೆ
ಗಳನ್ನು ಮಾಡದೇ ಚಿತ್ರ ಬರೆಯಬಹುದು. ಆದರೆ ಇಲ್ಲಿ
ಇದೊಂದು ಬಲವಂತ ಅಭ್ಯಾಸ . . ." ಎಂದು ಹೇಳುತ್ತಾ
ಹೇಳುತ್ತಾ ಫಿನ್ಲೆ ಮೋರ್ಸ್ ಒಂದು ಗುಡ್ಡೆ ಮಣ್ಣಿನಿಂದ ಒಂದು
ಪ್ರತಿಮೆಮಾಡಿದ. ಅಚ್ಚುಕಟ್ಟಾಗಿ, ಸ್ಫುಟವಾಗಿ ಮೂಡಿಬಂ

ಮೂರ್ತಿಯನ್ನು ನೋಡಿ ಅಲ್ಲಿದ್ದವರೆಲ್ಲ ಆಶ್ಚರ್ಯಪಟ್ಟರು. "'ಸೋಲುತ್ತಿರುವ ಹರ್‌ಕ್ಯುಲಿಸ್', ಎಷ್ಟು ನಯವಾಗಿ ಅವನ ನೋವು ಇಡೀ ಮೂರ್ತಿಯಲ್ಲಿ ಮೂಡಿದೆ!" "ನಿಮಗೆ, ಇದು ಹರ್‌ಕ್ಯುಲಿಸ್‌ನ ಸೋಲುವ ಭಾವ ಎಂದು ತಕ್ಷಣ ಹೇಗೆ ತಿಳಿಯಿತು?"

"ಅವನ ಜೀವನ ಚರಿತ್ರೆ ಓದುವಾಗ, ಸೋಲುತ್ತಿರುವ ಹರ್‌ಕ್ಯುಲಿಸ್ ಬಗೆಗೆ ಓದಿ ಎಂತಹ ನೋವನ್ನು ನೀನು ಅನುಭವಿಸಿದೆ ಎಂದು ನನಗೆ ಚನ್ನಾಗಿ ಗೊತ್ತು. ಅಷ್ಟು ತೀಕ್ಷ್ಣ ವಾಗಿ ಅನುಭವಿಸಿದ್ದಕ್ಕೆ, ಅಷ್ಟು ಭಾವುಕವಾಗಿ ಈ ಮೂರ್ತಿ ಮೂಡಿಬಂದಿತು. ಇದರ ಅಚ್ಚುಗಳನ್ನು ಸಿದ್ಧಪಡಿಸಿಕೋ" ಎಂದು ಅಧಿಕಾರಿ ನುಡಿದಾಗ ಫಿನ್ಲೆ ತನ್ನ ಕಿವಿಯನ್ನೇ ನಂಬದಾದ!

"ಹೌದು ಗೆಲುವು ಎಲ್ಲರಿಗೂ ಸಂತೋಷಕೊಡುವ ಭಾವನೆ —ಯಾರು ಬೇಕಾದರೂ ಎದುರಿಸುವ ಭಾವನೆ. ಆದರೆ ಸೋಲು? ಅದನ್ನೆದುರಿಸಲು ಎದೆಗಾರಿಕೆ ಬೇಕು. ಹೆಚ್ಚು ಮನಸ್ಥೈರ್ಯ ಬೇಕು."

ಕಲಾಶಾಲೆಯ ಅಧ್ಯಕ್ಷರು, ಈ ಮೂರ್ತಿಯನ್ನು ನೋಡಿ ಬಹಳ ಪ್ರಶಂಸೆ ಮಾಡಿದರು ಅದರ ಪ್ರತಿಕೃತಿಗಳನ್ನು ಮಾಡಿಸಿ, ಒಂದನ್ನು ಅಲ್ಲಿ ನಡೆಯುತ್ತಿದ್ದ ಶಿಲ್ಪಸ್ಪರ್ಧೆಗೆ ಕಳಿಸಿಯೂಬಿಟ್ಟರು.

ಫಿನ್ಲೆ ಮೋರ್ಸ್‌ಗೆ ಈಗ ಯುದ್ಧದ ಚಿಂತೆ, ತಾಯ್ನಾಡಿನ ಚಿಂತೆ, ತಾನು ಬಂದು ಸೇರಿದ ನಾಡಿನ ಚಿಂತೆ, ತಂದೆ ತಾಯಿ ತಮ್ಮಂದಿರ ಚಿಂತೆ. ಈ ಹೋರಾಟದಲ್ಲಿ ತನ್ನ ಕೃತಿಯ ಬಗ್ಗೆ ಸಂಪೂರ್ಣವಾಗಿ ಮರೆತ. ಅವನು ದಿನವೂ ಕೊರಗುವುದನ್ನು ನೋಡಲಾರದೆ ಅವನ ಗೆಳೆಯ, ಶಿಲ್ಪ ಪ್ರದರ್ಶನ ಮಂದಿರಕ್ಕೆ ಕರೆದೊಯ್ದ. ಅಲ್ಲಿ ಅವನ ಇತರ ಗೆಳೆಯರು, ಅವನಿಗಾಗಿಯೇ

ಕಾದು ನಿಂತಿದ್ದಂತೆ ಸ್ವಾಗತಿಸಿ ಒಳಗೆ ಕರೆದು ಕೂರಿಸಿದರು. ಅಂದು ತೀರ್ಪನ್ನು ಪ್ರಕಟಿಸಬೇಕಾಗಿತ್ತು. ಅದಕ್ಕೇ ಅಲ್ಲಿ ಬಹಳ ಮಂದಿ ಸೇರಿದ್ದರು. ಯಾವ ವಿಷಯವೂ ತಿಳಿಯದ ಫಿನ್ಲೆ ಮೋರ್ಸ್ ಅಧ್ಯಕ್ಷರ ಪಕ್ಕದಲ್ಲಿಯೇ ಕುಳಿತ. ತಾನು ಸ್ಪರ್ಧೆಗೆ ಕಳಿಸಿದ್ದ ಮೂರ್ತಿ ಎದುರಿಗೇ ಇತ್ತು. ಆದರೆ ಆ ಬಗ್ಗೆ ಅವನಿಗೆ ಮರೆತೇ ಹೋಗಿತ್ತು.

"ಶಿಲ್ಪ ಕೃತಿ—ಮೊದಲ ಬಹುಮಾನ—ಸಾಮ್ಯುಯಲ್ ಬ್ರೀಸ್ ಫಿನ್ಲೆ ಮೋರ್ಸ್‌ನ 'ಸೋಲುತ್ತಿರುವ ಹರ್ಕ್ಯುಲಿಸ್' ಪ್ರತಿಮೆಗಾಗಿ"

ಮುಂದಕ್ಕೆ ಫಿನ್ಲೆಗೆ ಕೇಳಿಸಲೇ ಇಲ್ಲ. ಪಕ್ಕದಲ್ಲಿದ್ದ ಅವನ ಗೆಳೆಯ ತನಗೆ ವಿಷಯ ತಿಳಿಸಿರಲಿಲ್ಲ ಎಂದು ಪ್ರೀತಿಯಿಂದ ಆಕ್ಷೇಪಿಸುತ್ತಿದ್ದ. ಆ ಪಕ್ಕದಲ್ಲಿದ್ದ ಅಧ್ಯಕ್ಷರು 'ಶುಭಾಷಯ' ಎನ್ನುತ್ತಿದ್ದರು. ಫಿನ್ಲೆಯ ಮನಸ್ಸು ಅಮೆರಿಕ ಮುಟ್ಟಿ ತಂದೆ ಯೊಡನೆ ಸಂಭಾಷಿಸುತಿತ್ತು. 'ಶೀಘ್ರ ಸಂದೇಶವಾಹಕ ಇರ ಬೇಕಾಗಿತ್ತು' ಎಂದು ಮತ್ತೊಮ್ಮೆ ಫಿನ್ಲೆಗೆ ಅದರ ಅವಶ್ಯಕತೆ ಕಾಣಿಸಿತು.

ಕೊರಡಿಗೆ ಬರುತ್ತಿದ್ದಂತೆಯೇ ಗೆಳೆಯ ಅವನ ವಿಶಾಲ ವಾದ ಭುಜಗಳನ್ನು ಅಳೆದ. 'ಇನ್ನೂ ಬೇಕಾದಷ್ಟು ಇಂತಹ ಪದಕಗಳು ಬರಲಿ. ನಿನ್ನ ವಿಶಾಲವಾದ ಮೈಕಟ್ಟಿಗೆ, ಬೇಕಾದಷ್ಟು ಪದಕಗಳನ್ನು ಹಾಕಬಹುದು. ಶಕ್ತಿ ಬೆಳೆಸಿಕೊ—ಅವನ್ನೆಲ್ಲ ಹೊರಬೇಕಿಲ್ಲ—ಒಂದು ವರುಷಕ್ಕೆಲ್ಲ ಮೊದಲ ಬಹುಮಾನ ಪಡೆದ ಪ್ರತಿಭಾವಂತ ನೀನು . . . " ಹೀಗೆ ಆಶೀರ್ವಾದಗಳನ್ನೂ, ಹಾರೈಕೆಗಳನ್ನೂ, ಹೊಗಳಿಕೆಗಳನ್ನೂ ಒಟ್ಟಿಗೇ ಹೇಳಿ ಗೆಳೆಯ ಸಂತಸಪಟ್ಟು ಕುಣಿದಾಡಿದ.

1815ನೆಯ ಇಸವಿ. ಅನಾವಶ್ಯಕವಾದ ಯುದ್ಧ ನಿಲು ಗಡೆಗೆ ಬಂದಿತ್ತು. ಫಿನ್ಲೆ ತನ್ನ ವ್ಯಾಸಂಗ ಮುಗಿಸಿ ಅಮೆರಿಕಾಗೆ ಹಿಂದಿರುಗುತ್ತಿದ್ದ. ಅವನ ಪರ್ಸ್ ಖಾಲಿ—ಆದರೆ ಚೀಲದ ತುಂಬ ಮೆಚ್ಚುಗೆಯ ಪತ್ರಗಳಿದ್ದವು. ಹೃದಯದ ತುಂಬ ಅನುಭವವಿತ್ತು ಗೆಳೆಯರ, ಗುರುಗಳ ಮೆಚ್ಚುಗೆಯ ಮಾತು ಗಳನ್ನು ಮೆಲಕು ಹಾಕುತ್ತಾ ತಾಯ್ನಾಡನ್ನು ಸೇರಿದ. ತನ್ನ ಮುಂದಿನ ಜೀವನ—ಕಲಾವಿದನಾಗಿ ಫಿನ್ಲೆ—ಕುರಿತು ಚಿಂತಿ ಸುತ್ತಾ ಬೋಸ್ಟನ್ ತಲುಪಿದ.

೩

ಬೋಸ್ಟನ್‌ನಲ್ಲಿ ಅವನ ಸ್ಟುಡಿಯೋ ಆರಂಭವಾಗಿ ವರ್ಷ ಕಳೆಯಿತು. ಅಲ್ಲಿ ಗೋಡೆಯ ತುಂಬಾ ವರ್ಣಚಿತ್ರಗಳು. ಒಂದೊಂದೂ ಅವನ ಶಿಕ್ಷಣದ, ಅನುಭವದ ಪ್ರತೀಕವಾಗಿತ್ತು. ಊರಿನ ಜನರೆಲ್ಲ ಬಂದು ನೋಡಿ, ಮೆಚ್ಚಿದರು. ಆದರೆ ಒಬ್ಬ ಶ್ರೀಮಂತನಾದರೂ ತನ್ನ ಚಿತ್ರ ಬರೆಸಿಕೊಳ್ಳಲಿಲ್ಲ. ಮೆಚ್ಚುಗೆ ಬೇಕಾದಷ್ಟು ದೊರೆತರೂ, ಹಣ ಸಂಪಾದನೆಯಾಗಲಿಲ್ಲ.

ಸಮಾರಂಭಗಳಿಗೆ ಆಹ್ವಾನ ದೊರಕಿತು. ಜನರ ಸ್ನೇಹಕ್ಕೆ ಅವಕಾಶವಾಯಿತು. ಆದರೆ ಬರಿಯ ಸ್ನೇಹದಿಂದ ಹೊಟ್ಟೆತುಂಬ ಬಹುದೆ? ಕೊನೆಗೆ ಯಾರಾದರೂ ಚಹಾಕ್ಕೆ ಕರೆದರೆ, ನೆಪ ಒಡ್ಡಿ ತಪ್ಪಿಸಲಾರಂಭಿಸಿದ.

"ಇಲ್ಲ ನೀವಿಂದು ಬರಲೇಬೇಕು. ಚಿತ್ರಗಳಲ್ಲಿ ಆಸಕ್ತಿ ಇರುವ ಯುವತಿ ಇಂದು, ನಿಮ್ಮನ್ನು ಕಾಣಲೆಂದೇ ನಮ್ಮಲ್ಲಿಗೆ ಬರುತ್ತಾಳೆ" ಎಂದು ಗೆಳೆಯರೊಬ್ಬರು ಕರೆದಾಗ ಅವನಿಗೆ ಬೇಸರ ಅತಿಯಾಯಿತು. ಇಂತಹ 'ಆಸಕ್ತ' ಮಹಿಳೆಯರನ್ನು

ನೋಡಿ, ನೋಡಿ ಅವನಿಗೆ ಬೇಸರವಾಗಿತ್ತು. ಅವರಿಗೆ ಚಿತ್ರ
ಸೊಬಗಿಗಿಂತಲೂ ತಮ್ಮ ಸೊಬಗಿನ ಮೇಲೇ ಹೆಚ
ಗಮನವಿತ್ತು. ಅವರ ಈ 'ತೋರಿಕೆಯ ಆಸಕ್ತಿ' ಅವನಿ
ಬೇಡವಾಗಿತ್ತು.

"ನಾನು ಊರಿಗೆ ಹೊರಟಿದ್ದೇನೆ. ಕ್ಷಮಿಸಿ."

"ಇಲ್ಲ. ನೀವು ಮಿಸ್ ಲೂಕ್ರೆಸಿ ವಾಕರ್ ಅವರನ್ನು ಭೆಟಿ
ಮಾಡದೇ ಇರಬೇಡಿ. ನಿಮ್ಮ ಕಾರ್ಯಕ್ರಮವನ್ನು ಒಂದು ದಿ
ಮುಂದಕ್ಕೆ ಹಾಕಿ" ಎಂದು ಗೆಳೆಯರು ಒತ್ತಾಯ ಮಾಡಿದಾ
ಅವನಿಗೆ ಅನ್ಯಮಾರ್ಗವಿಲ್ಲದೇ ಹೋಯಿತು.

"ಫಿನ್ಲೆ ಮೋರ್ಸ್ ಒಳ್ಳೆಯ ಕಲಾವಿದನ ಹಾಗೆ ಕಾಣ
ತ್ತಾನೆ. ಅವನಿಗೊಂದು ಮಾರ್ಗ ಮಾಡಿಕೊಡಬೇಕು."

"ಛೆ! ಛೆ! ಕಲಾವಿದರನ್ನು ಕೆಲಸಕ್ಕೆ ಹಚ್ಚಬೇಡಿಪ್ಪ
ವ್ಯವಹಾರಕ್ಕೂ ಅವರಿಗೂ ಸರಿಯಾಗದು. ಅವರ ಪ್ರತಿ
ವ್ಯರ್ಥವಾಗಿ ಹೋಗುತ್ತದೆ. ಅವರು ಕಲಾವಿದರಾಗಿಯೇ ಉಳಿಯ
ಬೇಕು."

ತನ್ನ ಬಗ್ಗೆಯೇ ಮಾತನಾಡುತ್ತಿದ್ದ ಯುವತಿಯ ಧ್ವನಿ
ಅವನಿಗೆ, ಏಕೋ ಏನೋ ಬಹಳ ಮಧುರವಾಗಿ ಕೇಳಿಸಿತು
ಅವರೂ, ತಾನು ಹೋಗಬೇಕೆಂದಿದ್ದ ಮನೆಗೇ ಹೋದಾಗ
ಅವನಿಗೆ ಹರ್ಷವೇ ಆಯಿತು. ಮಧುರ ಕಂಠದ ಯುವ
ಸುಂದರಿಯೂ ಹೌದು ಎನಿಸಿತು. ಅವಳ ಮಾತಿನಿಂದ ವ್ಯಕ್ತ
ವಾದ, ಅಭಿರುಚಿ, ವ್ಯಕ್ತಿತ್ವ ಅವನನ್ನು ಸೆರೆಹಿಡಿಯಿತು. ಅವನ
ಪ್ರಯಾಣ ಮುಂದೂಡಿದ. ಅವಳೊಡನೆ ಮಾತನಾಡಿದರೆ ಅವನಿ
ಸಮಾಧಾನವಾಗುತ್ತಿತ್ತು. ಅವರು ಪರಸ್ಪರ ಹೆಚ್ಚೆಚ್ಚು ಹತ್ತಿ
ವಾದರು. ಅವರ ಭಾವನಾ ಪ್ರಪಂಚ ವಿಸ್ತಾರವಾಯಿತು. ಅ

ಅವರ ವಿಹಾರ ಯಾವ ಪ್ರಾಪಂಚಿಕ ತೊಳಲಾಟವೂ ಇಲ್ಲದೆ ಸುಖವಾಗಿತ್ತು.

ಒಂದು ವರ್ಷ ಕಳೆದರೂ ಫಿನ್ಲೆ ಮೋರ್ಸ್ ತನಗೆ ತೃಪ್ತಿ ಯಾಗುವಷ್ಟು ದುಡಿಯಲು ಆಗಲಿಲ್ಲ.

"ನಾನೀಗ, ಚಿಕ್ಕಪ್ಪನಲ್ಲಿಗೆ ಹೋಗಿ ಅಲ್ಲಿ ಸ್ವಲ್ಪ ಏನಾದರೂ ದುಡಿಮೆ ಸಾಧ್ಯವೇ ನೋಡುತ್ತೇನೆ. ಬಂದಮೇಲೆ ಮದುವೆ. ಆಮೇಲೆ . . . . ಒಟ್ಟೊಟ್ಟಿಗೆ ಇರುವುದು" ಎಂದು ಪ್ರೇಯಸಿಗೆ ಸಮಾಧಾನ ಹೇಳಿ ಫಿನ್ಲೆ ಮೋರ್ಸ್ ದಕ್ಷಿಣ ದಿಕ್ಕಿಗೆ ಪ್ರಯಾಣ ಹೊರಟ.

ಅಲ್ಲಿ ಜೊತೆಯವರೊಡನೆ ಸುತ್ತಾಡುತ್ತಾ, ಪ್ರಕೃತಿಯ ಸೌಂದರ್ಯವನ್ನು ಸವಿಯುತ್ತಾ ಕಾಲಕಳೆದ. ಅಲ್ಲಿಯೂ ಅವನಿಗೆ ಗೆಳೆಯರು ಸಿಕ್ಕಿದರು. ಆದರೆ ಗಿರಾಕಿಗಳು ಮಾತ್ರ ಸಿಗಲಿಲ್ಲ.

"ನಾನು ಬೇಗನೆ ಅಲ್ಲಿಗೆ ಬರುತ್ತೇನೆ. ನನಗೆ ಇಲ್ಲಿ ಅದೃಷ್ಟ ಒಲಿಯಲಿಲ್ಲ. ನಿನ್ನನ್ನು ಕಾಣಬೇಕು." ಲೂಕ್ರಸಿ ಅವನಿಗಾಗಿ ಕಾಯುತ್ತಾ ಕುಳಿತರೆ, ಮತ್ತೊಂದು ಕಾಗದವೇ ಬಂದಿತು. "ನನಗೀಗ ಅದೃಷ್ಟ ಸಿಕ್ಕಿದೆ. ಅದು ನಮ್ಮಿಬ್ಬರನ್ನು ಇನ್ನು ಸ್ವಲ್ಪ ದಿನ ದೂರ ಇಟ್ಟಿರುತ್ತದೆ."

ಊರಿಗೆ ಹೊರಡುವುದರಲ್ಲಿ ಚಿಕ್ಕಪ್ಪನ ಚಿತ್ರವಾದರೂ ಬರೆಯಬೇಕು ಎನಿಸಿ, ಬರೆಯುತ್ತಿದ್ದಾಗ, ಮುಕ್ಕಾಲು ಮುಗಿದ ಚಿತ್ರವನ್ನು ನೋಡಿದ ಚಿಕ್ಕಪ್ಪ "ನೀನಿಷ್ಟು ಚನ್ನಾಗಿ ಬರೆಯು ತ್ತೀಯಾ? ನನ್ನ ಗೆಳೆಯರಿಗೆ ಚಿತ್ರ ತೋರಿಸಬೇಕು" ಎಂದು ಕುಣಿದಾಡುತ್ತಾ ಗೆಳೆಯರನ್ನು ಕರೆತಂದ. ಅವನಿಗೆ ಅನಂತರ ಲೂಕ್ರೆಸಿಗೊಂದು ದೀರ್ಘ ಪತ್ರ ಬರೆಯಲೂ ಸಮಯವಿಲ್ಲದೆ, ಒಂದೆರಡು ಸಾಲು ಬರೆದು ತನ್ನ ವಿಷಯ ತಿಳಿಸಬೇಕಾಯಿತು.

ಜೇಬಿನ ತುಂಬ ಸಂಪಾದನೆ ಮಾಡಿಕೊಂಡು ಬಂದ ಫಿನ್
ಮೋರ್ಸ್ ಆತ್ಮವಿಶ್ವಾಸದಿಂದ, ಲೂಕ್ರೆಸಿ ವಾಕರ್‌ಳನ್ನು ಮದು
ಯಾದ.

ತಮಗೆ ಸಮಾನರಾದ ಸುಖಿಗಳಿಲ್ಲ ಎಂದು ಭಾವಿಸಿಕೊಂ
ನಾಲ್ಕು ವರ್ಷಗಳನ್ನು ಕಳೆದರು, ಆ ಭಾವಜೀವಿಗಳು. ಅವರ
ಮಕ್ಕಳಾಗಿ ಪುಟ್ಟ ಸಂಗಾತಿಗಳು ದೊರಕಿದರು. ಸೂಸನ್
ಎರಡು ವರ್ಷ. ಚಾರ್ಲ್ಸ್ ಪುಟ್ಟಮಗು. ಮಕ್ಕಳೊಡ
ಮಕ್ಕಳಾಗಿ ಆಡುತ್ತಿದ್ದ ಎರಡು ಹಕ್ಕಿಗಳಲ್ಲಿ, ತಂದೆ ಹ
ಮೊದಲು ಪ್ರಪಂಚಕ್ಕೆ ಇಳಿಯಿತು.

"ಲೂಕ್ರೆಸಿ ನಾನೀಗ ಚಾರಿತ್ರಿಕ ಘಟನೆಗಳನ್ನು ಚಿತ್ರಿಸಿ ನ
ಜೀವನವನ್ನು ಪುನರಾರಂಭಿಸಬೇಕು. ನಾನು ಇಲ್ಲಿಂದ ಹೊರ
ತ್ತೇನೆ. ರಾಜಧಾನಿಗೆ ಹೋಗಿ ಕೆಲಸ ನೋಡಬೇಕು" ಎಂದ
ಹೊರಟ. ತಂದೆಯೊಡನೆ ಮಡದಿಯನ್ನೂ ಮಕ್ಕಳನ್ನೂ ಬಿಟ
ಹೊರಟ. ಕರ್ತವ್ಯ, ಭಾವನೆಗಳು ಬೇರೆ ಬೇರೆ ದಾರಿ ಹಿಡಿದವ

ರಾಜಧಾನಿಯಲ್ಲಿ ಎಲ್ಲವೂ ತಗ್ಗು. ಅವನಿಗೊಂದು ಸ
ಕೋಣೆ ಸಿಗಲು ಅವನು ಹಳೆಯ ಗೆಳೆಯರನ್ನು ಆಶ್ರಯಿ
ಬೇಕಾಯಿತು. ಅಲ್ಲಿ ಅಧಿಕಾರಿಗಳನ್ನು ನೋಡಿ, ಕೆಲಸ ಪಡೆದ
ಕೊಂಡು, ಹಗಲೂ ರಾತ್ರಿ ದುಡಿದು, ಬರೆಯಬೇಕಾದ ಚಿತ್ರ
ನಕ್ಷೆಯನ್ನು ಬರೆದುಕೊಂಡ.

ಅಲ್ಲಿಯೇ ಉಳಿದು ಕೋಣೆಯ ಬಾಡಿಗೆಗೆ ಖರ್ಚುಮಾಡ
ವುದಕ್ಕಿಂತ, ಊರಿಗೆ ಹೋದರೆ ಒಳ್ಳೆಯದು ಎನಿಸಿತು. ಅ
ಮಡದಿ, ಮಕ್ಕಳು, ತಂದೆಯ ಜೊತೆಯಲ್ಲಿ, ದಣಿಯದೇ ಹೆಚ್ಚ
ದುಡಿದು, ಕೆಲಸವನ್ನು ನಿರೀಕ್ಷೆಗಿಂತ ಮೊದಲೇ ಮುಗಿಸಿದ.

ಪಕ್ಕದಲ್ಲಿ ವಾಸಮಾಡುತ್ತಿದ್ದ ಪ್ರೊ. ಸಿಲಿಮನ್‌ರ ಚಿ

ಬರೆಯಬೇಕಾಯಿತು. ಆದಕ್ಕಾಗಿ ಫಿನ್ಲೆ ಮೋರ್ಸ್ ಅವರನ್ನು ಭೇಟಿಮಾಡಿದ. ಅವರು ತಮ್ಮ ವಿದ್ಯುತ್ ಪ್ರಯೋಗಶಾಲೆಯಲ್ಲಿ ಕಾರ್ಯನಿರತರಾಗಿದ್ದರು.

"ನಿಮ್ಮ ಪಾಡಿಗೆ ಕೆಲಸ ಮಾಡಿಕೊಳ್ಳಿರಿ. ನಾನು ನೋಡುತ್ತಾ ನಿಮ್ಮನ್ನು ಚಿತ್ರಿಸಿಕೊಳ್ಳುತ್ತೇನೆ." ಫಿನ್ಲೆ ಅವರ ಚಿತ್ರದ ರೂಪವನ್ನು ಬರೆದುಕೊಂಡ. ಪ್ರೊಫೆಸರ್ ತಮ್ಮ ಪ್ರಯೋಗದ ಬಗ್ಗೆ, ವಿದ್ಯುತ್ತಿನ ಬಗ್ಗೆ ಮಾತನಾಡುತ್ತಿದ್ದರು. ವಿದ್ಯುತ್ ಬಗ್ಗೆ ಮಾತನಾಡುವಾಗ ಆ ಪುಟ್ಟ ಮುಖದಲ್ಲಿ ಅವರ ಕಣ್ಣು ಹೇಗೆ ಹೊಳೆಯುತ್ತಿತ್ತು! ಆ ಹೊಳಪನ್ನು ಚಿತ್ರದಲ್ಲಿ ಮೂಡಿಸಬೇಕಾಗಿತ್ತು.

"ಪ್ರೊಫೆಸರ್ ಈ ವಿದ್ಯುತ್ತಿನ ಬಗ್ಗೆ ಬೇಕಾದಷ್ಟು ಹೇಳಿದಿರಿ. ಆದರೆ ಅದರಿಂದ ಯಾರಿಗಾದರೂ ಏನು ಪ್ರಯೋಜನ?"

"ಬೆಂಜಮಿನ್ ಹೇಳುವ ಹಾಗೆ, ಆಗತಾನೆ ಹುಟ್ಟಿದ ಶಿಶುವಿನಿಂದ ಏನು ಪ್ರಯೋಜನ?"

"ಇದು ರೂಪ ತಳೆದು ಮೂವತ್ತು ವರ್ಷಗಳಾದುವು. ಇನ್ನೂ ಇದು ಶಿಶುವಾದರೆ, ನಿಮ್ಮ ಪ್ರಯೋಗಶಾಲೆಯಿಂದ ಅದಕ್ಕೆ ಬಿಡುಗಡೆ ಎಂದು?"

"ಹೌದು. ಅದು ಒಂದು ದೊಡ್ಡ ರಾಕ್ಷಸನಾಗಿ ಹೊರಗೆ ಬರುತ್ತದೆ. ಮುಂದೆ ಒಂದು ದಿನ, ನಮಗೆ ವಿದ್ಯುತ್ ಇಲ್ಲದಿದ್ದರೆ ದಿನ ಸೂಕುವುದೇ ಆಗದು—ಅಂತಹ ಭೂತವಾಗಿಬಿಡುತ್ತದೆ."

ತಿಂಗಳುಗಳು ಉರುಳಿದವು. ಅವರ ಚಿತ್ರಗಳ ರಾಶಿ ಮನೆಯಲ್ಲಿ ಬೆಳೆಯಿತು. ಅವನ ಕೂಡಿಟ್ಟ ಹಣ ಕರಗುತ್ತಾ ಬಂದಿತು. ಅವನು ಪುನಃ ನ್ಯೂಯಾರ್ಕಿಗೆ ಹೊರಟು ನಿಂತ.

"ಇದೊಂದು ಬಾರಿ ಹೋಗಿ ನೋಡುತ್ತೇನೆ. ನ್ಯೂಯಾರ್ಕಿ

ನಲ್ಲಿಯೇ ಮನೆಮಾಡಿ ನಿನ್ನನ್ನು ಕರೆಸಿಕೊಳ್ಳುತ್ತೇನೆ. ಆಮೇ
ಎಲ್ಲರೂ ಒಟ್ಟಿಗೆ ಅಲ್ಲಿಯೇ ಇರಬಹುದು" ಎಂದು ಮಡದಿಯನ
ಒಪ್ಪಿಸಿ ಹೊರಟ.

ಅಲ್ಲಿ ಅವನಿಗೆ ಉಳಿಯಲು ಒಂದು ಅಗ್ಗವಾದ ಕೊಠ
ಬೇಕಾಗಿತ್ತು. ಅದೇ ಅವನಿಗೆ ಚಿತ್ರಪ್ರದರ್ಶನದ ಕೋಣೆ, ಚಿತ್ರ
ಬರೆಯುವ ಕೋಣೆ, ಮಲಗುವ ಕೋಣೆ, ಅಡುಗೆಯ ಕೋ
ಎಲ್ಲ ಆಗಬೇಕಾಗಿತ್ತು. ಅಂತಹ ಕೋಣೆ ಸಿಕ್ಕಿತು. ಅದರಲ್ಲಿ
ಆರು ತಿಂಗಳು ಕಳೆದಾಯಿತು. ಯಾವ ಮಾರ್ಗವೂ ತೆರೆಯಲಿಲ್ಲ
ಅವನಿಗೆ ಮೂರನೆಯ ಮಗುವಾದ ಸುದ್ದಿ ಬಂದಿತು. ಜೊ
ಯಲ್ಲಿಯೇ ಅದೃಷ್ಟ ಬಂದಂತೆ ಅವನಿಗೆ ಚಿತ್ರ ಬರೆಯುವ ಕೆಲಸವೂ
ಸಿಕ್ಕಿತು. ಹಣ ಈಗ ಬಂದು ಸುರಿಯಲಾರಂಭಿಸಿತು.

"ನಮಗೊಂದು ಮನೆ ನೋಡುತ್ತಿದ್ದೇನೆ" ಎಂದ
ಮನೆಗೆ ಕಾಗದ ಬರೆದ. ಆ ಕಾಗದ ಕುದುರೆಯ ಗಾಡಿಯ
ಊರನ್ನು ತಲುಪಬೇಕಾಗಿತ್ತು. ಅದು ಅವಳಿಗೆ ತಲುಪುವು
ರೊಳಗೆ ಅವನಿಗೆ ಬೇರೆ ಊರಿಗೆ ಹೋಗಿ ಒಂದು ದೊಡ್ಡ ಕೆಲ
ಮಾಡಬೇಕಾಗಿ ಪತ್ರ ಬಂದಿತು. ಅದರಿಂದ ಅವನಿಗೆ ಬೇಕಾದಷ್ಟು
ಹಣ ಸಂಪಾದನೆಯಾಯಿತು. ಆದರೆ ಮನೆಗೆ ಮಡದಿ ಮಕ್ಕಳನ
ಕರೆಸುವ ಏರ್ಪಾಡು ತಡವಾಗಬೇಕಾಯಿತು.

ದೇಶಪ್ರೇಮಿ, ನಿಷ್ಠಾವಂತ ಸೈನ್ಯಾಧಿಕಾರಿಯ ಚಿತ್ರೀಕರಣ
ಕೆಲಸ ಅವನಿಗೆ ಪ್ರಿಯವಾಗಿತ್ತು. ಆ ಎಂಬತ್ತು ವರುಷ
ಉತ್ಸಾಹೀ 'ಯುವಕ'ನನ್ನು ಚಿತ್ರಿಸುವುದು ಅವನಿಗೆ ಹೊ
ಚೈತನ್ಯವನ್ನು ಒದಗಿಸಿತು.

ಫಿನ್ಲೆಗೆ ಬೇಸರವಾಗದ ಹಾಗೆ ಆ ಅಧಿಕಾರಿ ತನ
ಅನುಭವದ ಕಥೆಗಳನ್ನು ಸ್ವಾರಸ್ಯವಾಗಿ ಹೇಳುತ್ತಿದ್ದ. ಅವನಿಗಾ

ವ್ಯಥೆಯ ಕಥೆ ಕೇಳಿ ಫಿನ್ಲೆ ತನ್ನ ವಿರಹದ ಹೊರೆಯನ್ನು ಸ್ವಲ್ಪ ಮಟ್ಟಿಗೆ ಮರೆತ. ಅಧಿಕಾರಿ ಯುದ್ಧ ಸಮಯದಲ್ಲಿ ಮಡದಿಯನ್ನು ಬಿಟ್ಟಿರಬೇಕಾದದ್ದು, ಕೊನೆಗೆ ಅವಳು, ಅವನ ಜೊತೆಯಲ್ಲಿ ಸೆರೆವಾಸ ಅನುಭವಿಸಿದ್ದನ್ನು ನೆನೆದು ಕಣ್ಣೀರು ಹಾಕಿದಾಗ, ನಮ್ಮ ಕಲಾವಿದನಿಗೆ ತನ್ನಂತಹ ದುಃಖಿಗಳೂ ಇದ್ದಾರೆ ಎನಿಸಿತು.

ಅಂದೇ ರಾತ್ರಿ ಲೂಕ್ರೆಸಿಗೆ ಒಂದು ದೀರ್ಘ ಪತ್ರ ಬರೆದ. ತನ್ನ ಭಾವನೆಗಳನ್ನೆಲ್ಲ ತುಂಬಿ, ಸೈನ್ಯಾಧಿಕಾರಿಯ ಕಥೆಯನ್ನೂ ಬರೆದ. ಮನೆ ಸಿಕ್ಕಿರುವ ವಿಷಯವನ್ನು ಸೇರಿಸಲು ಮರೆಯಲಿಲ್ಲ. ಬೆಳಗ್ಗೆದ್ದು ಒಮ್ಮೆ ಓದಿನೋಡಿದ. ಹೇಳಬೇಕಾದ್ದನ್ನು ಬರೆದು ಮುಗಿಸಿದ್ದ. ಮತ್ತೆ ಓದಿದ. ಏನೋ ಕೊರತೆ ಎನಿಸಿತು. ಕೊರತೆಯನ್ನು ಕಾಗದದಲ್ಲಿ ತುಂಬಲಾರದೆ, ಅವಳನ್ನೇ ಮತ್ತೆ ಮತ್ತೆ ಬರಹೇಳಿದ. ಅಂಚೆಗೆ ಹಾಕುವ ಮೊದಲೇ ಅವನಿಗೆ ಊರಿನಿಂದ ಪತ್ರ ಬಂದಿತು. ವಿಳಾಸ ಹೆಂಡತಿಯ ಕೈಬರಹ ಅಲ್ಲ ತಂದೆಯದು ಎಂದು ನೋಡಿಯೇ ಮನಸ್ಸು ಮುದುಡಿತು. ಆದರೆ ಮನೆಯ ಕಾಗದ–ಅದರಲ್ಲಿ ತನ್ನವಳ ವಿಷಯವೂ ಇರುತ್ತದೆ–ಎಂದು ಓದಿದ. ಹೌದು ಆದರಲ್ಲಿ ಬರಿಯ ಅವಳ ವಿಷಯಮಾತ್ರವಿತ್ತು. 'ಲೂಕ್ರೆಸಿ ಹೃದಯಾಘಾತದಿಂದ ದೈವಾಧೀನಳಾದಳು.' ಅವನ ಆ ಹೊಸಮನೆಗೆ ಅವನ ಮನದ ಒಡತಿ ಬರಲೇ ಇಲ್ಲ.

೪

ಎಷ್ಟೋ ರಾತ್ರಿಗಳನ್ನು ಮನೆಯಿಂದ ಹೊರಗೆ, ನಿದ್ರಿಸಿ ಕೊಂಡೇ ಕಳೆದ. ಸೂರ್ಯೋದಯ ಸೂರ್ಯಾಸ್ತಗಳೇ ಅವನ ನಿತ್ಯ ಸಂಗಾತಿಗಳಾದವು.

ಒಮ್ಮೆ ಹಾಗೆ ಸುತ್ತು ಬರುವಾಗ, ಅಮೆರಿಕ ಕಲಾಶಾಲೆ

ಯಲ್ಲಿ ನಡೆಯುತ್ತಿದ್ದ ಗಲಾಟೆ, ಅವನನ್ನು ಅನ್ಯಜ್ಞಾನದಿಂದ
ವಾಸ್ತವ ಪ್ರಪಂಚಕ್ಕೆ ಎಳೆಯಿತು. ಅಲ್ಲಿ ಇಬ್ಬರು ಕಲಾಭ್ಯಾಸಿ
ಗಳಿಗೂ ಅಲ್ಲಿಯ ಜವಾನನಿಗೂ ವಾಗ್ಯುದ್ಧ ನಡೆಯುತ್ತಿತ್ತು
ಬೆಳಗಿನ 6 ಗಂಟೆಗೆ ತೆರೆಯಬೇಕಾದ ಶಾಲೆ 6-30 ಆದರೂ
ಮುಚ್ಚಿದೆ ಎಂದು ಅಭ್ಯಾಸಿಗಳು ತಕರಾರು ತೆಗೆದಿದ್ದರು. ಜವಾನ
'ನನ್ನಿಷ್ಟ ನೀವು ಬೇರೆ ಕಡೆ ಬೇಕಾದರೆ ಹೋಗಿ' ಎಂದು
ಕೂಗಾಡುತ್ತಿದ್ದ. ಫಿನ್ಲೆ ಮೋರ್ಸ್ ಮಧ್ಯಪ್ರವೇಶಿಸಿದರೂ
ಕಲಾಭ್ಯಾಸಿಗಳಿಗೆ ಅನುಕೂಲವಾಗಲಿಲ್ಲ. ಮೋರ್ಸ್‌ನ ಸುಪ್ತ
ವಾಗಿದ್ದ ಕಲಾಚೈತನ್ಯ ತಲೆಎತ್ತಿತು. ಅವನೀಗ ಬೇರೊಂದು
ಕಲಾಶಾಲೆಯನ್ನೇ ತೆರೆದ. ಬೇಕಾದಷ್ಟು ಯುವಕರಿಗೆ ಮಾರ್ಗ
ದರ್ಶನ ನೀಡಿದ. ಆ ಜವಾನನ ಸಣ್ಣತನದಿಂದ, ಅಮೆರಿಕಾಗೆ
ಒಂದು ಹಿರಿಯ ಕಲಾಶಾಲೆ ಬಹುಮಾನವಾಗಿ ದೊರಕಿತು.
ಫಿನ್ಲೆ ಮೊರ್ಸ್ನಿಗೆ ಹಣದ ಒರತೆಯೇ ಸಿಕ್ಕಿತು.

ಎಲ್ಲೆಲ್ಲೋ ಸಂಬಂಧಿಕರ ಮನೆಯಲ್ಲಿ ಓದುತ್ತಿದ್ದ
ಮಕ್ಕಳಿಗೆ, ಅವರ ವ್ಯಾಸಂಗಕ್ಕೆ ಸಾಕಷ್ಟು ಹಣವನ್ನು ಕೂಡಿಟ್ಟ
ಯೂರೋಪಿನ ಪ್ರವಾಸಕ್ಕೆ ಬೇಕಾಗುವ ಪ್ರಯಾಣದ ವೆಚ್ಚವನ್ನು
ತಾನುಳಿಸಿಕೊಂಡ. ಅವನ ಗೆಳೆಯರೂ ಶಿಷ್ಯರೂ ಕೂಡಿ
ಅವನಿಗೆ ಕೆಲವು ಚಿತ್ರಗಳಿಗಾಗಿ ಮುಂಗಡ ಹಣವನ್ನು ಕೊಟ್ಟು
ಅವನ ಯೂರೋಪಿನ ಪ್ರವಾಸಕ್ಕೆ ಅನುಕೂಲ ಮಾಡಿಕೊಟ್ಟರು

ಯೂರೋಪಿನಲ್ಲಿ ಎರಡು ವರ್ಷಗಳಕಾಲ, ಎಲ್ಲ ಚಿತ್ರಶಾಲೆ
ಗಳನ್ನೂ ನೋಡುತ್ತಾ ಕಲಾಕಾರರನ್ನು ಸಂಧಿಸುತ್ತಾ ಸಮಾಧಾನ
ವಾಗಿ ಕಳೆದ. ಹಿಂತಿರುಗುವ ಮುನ್ನ ಫ್ರಾನ್ಸ್ ದೇಶದಲ್ಲಿ
ದೂರ ಸಂದೇಶ ವಾಹಕವಾಗಿ ಉಪಯೋಗಿಸುತ್ತಿರುವ 'ಸೆಮಾ
ಫೋರ್' ಪದ್ಧತಿಯನ್ನು ನೋಡಲು ಹೊರಟ. "ಅಮೆರಿ

ದಂತಹ ವಿಸ್ತಾರವಾದ ರಾಜ್ಯವನ್ನು ಮಾನಸಿಕವಾಗಿ ಹತ್ತಿರ ವಾಗಿಡಲು ಇಂತಹ ಒಂದು ಸಂದೇಶವಾಹಕ ಅವಶ್ಯ" ಎಂದು ಅವನಿಗೆ ಅನ್ನಿಸಿತು.

ಫ್ರಾನ್ಸ್‌ದೇಶದ 'ಸೆಮಾಫೋರ್' ಅವನಿಗೆ ಸಮರ್ಪಕ ವಾಗಿ ಕಾಣಲಿಲ್ಲ. ಮಂಜು ಮುಸುಕದ ದಿನಗಳಲ್ಲಿ ಮಾತ್ರ ಸಂದೇಶ ಕಳುಹಿಸಬಹುದು. ಅಲ್ಲದೇ ಒಂದೊಂದು ಕಂಬಕ್ಕೆ ಒಂದೊಂದು ಆಳು ಬೇಕು. ಇದರಿಂದ ಒಂದು ಸಂದೇಶದಲ್ಲಿ ಅಷ್ಟು ತಪ್ಪುಗಳು ಸಂಭವಿಸುವ ಸಾಧ್ಯತೆ ಇತ್ತು. ರಾತ್ರಿಯ ವೇಳೆ ಸಂದೇಶವಹನ ಸಾಧ್ಯವಿಲ್ಲ. ಅಲ್ಲದೇ ವಿಸ್ತಾರವಾದ ತನ್ನ ದೇಶಕ್ಕೆ ಇದು ತೃಪ್ತಿಕರವಾದ ವ್ಯವಸ್ಥೆ ಅಲ್ಲ ಎಂದುಕೊಂಡ. ಅವನಿಗೆ ಬೆಳಕಿನಷ್ಟೇ ವೇಗವಾಗಿ, ಸರಾಗವಾಗಿ, ಸಂದೇಶ ಪ್ರಸಾರ ವಾಗಬೇಕೆಂಬ ಆಕಾಂಕ್ಷೆ ಇತ್ತು.

ಅಮೆರಿಕಾಗೆ ಹಿಂತಿರುಗಲು ಇನ್ನು ಮೂರು ತಿಂಗಳು ಉಳಿಯಿತು. ಅಲ್ಲಿಯೇ ಸುತ್ತಾಡಿ ಹೊಸ ಗೆಳೆಯರ ಶಿಷ್ಯರ ಸ್ನೇಹವನ್ನು ಬೆಳೆಸಿಕೊಂಡ.

ಹಡಗಿನ ಪ್ರಯಾಣಕ್ಕೆ ಕೊಟ್ಟು ಉಳಿದ ಹಣ ಬರಿಯ ಎರಡು ಪೆನ್ನಿ. ಮತ್ತೊಮ್ಮೆ ಬರಿಯ ಜೇಬಿನಲ್ಲಿ ತಾಯ್ನಾಡಿಗೆ ಹೊರಟಿದ್ದ. ಈಗವನಿಗೆ ಹಣವಿಲ್ಲ ಎನ್ನುವ ಚಿಂತೆ ಇರಲಿಲ್ಲ. ವಿಶಾಲವಾದ ಸಮುದ್ರ, ಅದರ ನೀಲಿಬಣ್ಣ, ಅದರ ಗಾಂಭೀರ್ಯ ಅವನ ಮನಸ್ಸನ್ನು ಪೂರ್ತಿಯಾಗಿ ಆಕ್ರಮಿಸಿತ್ತು. ಹತ್ತಿರ ದಲ್ಲಿಯೇ ಕುಳಿತು ಗಲಾಟೆ ಎಬ್ಬಿಸುತ್ತಿದ್ದ ಜನರಿಂದ ಅವನಿಗೆ ಒಂದಿಷ್ಟೂ ಕಷ್ಟವಾಗಲಿಲ್ಲ. ಅವನ ಮನಸ್ಸು ಸಮುದ್ರದ ಗಂಭೀರ ಮೌನವನ್ನು ಆಲೈಸುತ್ತಿತ್ತು.

". . . . . ಎಷ್ಟು ಮೈಲಿಗಳು ಬೇಕಾದರೂ ಸರಿ, ಅಷ್ಟು

ಉದ್ದ ತಂತಿ ಇರಬೇಕು." ಫಿನ್ಲೆ ಮೋರ್ಸ್‌ಗೆ ಎಚ್ಚರವಾಯಿ
ಈಗ ಅವರ ಮಾತಿಗೆ ಕಿವಿಗೊಟ್ಟ.

"ಅದು ಸಾಧ್ಯವಿಲ್ಲ"—ಒಂದು ಹುಡುಗ ರಾಗ ಎಳೆದ.

"ನೋಡು ಮಾಡುತ್ತೇನೆ" ಎಂದು ಹೇಳಿದ ಹಿರಿಯ
ಒಂದು ಪ್ರಯೋಗ ಮಾಡಿದ. ಒಂದು ಕಬ್ಬಿಣದ ತುಂಡಿಗೆ ತಂ
ಯನ್ನು ಸುರಳಿಯ ಹಾಗೆ ಸುತ್ತಿದ. ತಂತಿಯ ಎರಡು ತು
ಗಳನ್ನು ಒಂದು ವಿದ್ಯುತ್ ಕೋಶಕ್ಕೆ ಸೇರಿಸಿದ. ಕಬ್ಬಿಣದ ತುಂಡ
ಅಯಸ್ಕಾಂತ ಗುಣವನ್ನು ಪಡೆಯಿತು. ಒಂದು ತುಂಡು ಮೊ
ಯನ್ನು ಎಳೆದುಕೊಂಡಿತು. ತಂತಿಯನ್ನು ಎಲ್ಲಿಯೋ ಒಂದ
ಕಡೆ ಕತ್ತರಿಸಿದ ಒಡನೆ ಮೊಳೆ ಬಿದ್ದು ಬಿಟ್ಟಿತು. "ನೋಡಿದೆಯಾ

"ಮೈಲಿಗಟ್ಟಲೆ ಹೋಗಬೇಕಾದರೆ ಅದಕ್ಕೆ ಎಷ್ಟು ಕಾ
ಬೇಕು?"

"ಎಷ್ಟು ಕಾಲವೂ ಬೇಡ. ಇಲ್ಲಿ ಕತ್ತರಿ ಹಾಕಿದರೆ ಎಷ್ಟೊ
ಮೈಲಿ ದೂರದಲ್ಲಿರುವ ಅಯಸ್ಕಾಂತ ತನ್ನ ಗುಣ ಕಳೆದ
ಕೊಳ್ಳುತ್ತದೆ."

"ಅದು ಹೇಗೆ?"

"ಹೇಗೋ. ಏಕೊ. ಅಂತೂ ಅದು ನಿಜ! ವಿದ್ಯುತ್ತಿ
ತಂತಿಯ ಮೂಲಕ ಹರಿಯಲು ಕಾಲಾವಕಾಶ ಬೇಡ." ಫಿನ್ಲೆ
ಮೋರ್ಸ್‌ಗೆ ಇಷ್ಟು ವಿಷಯ ಸಾಕಾಯಿತು. ಅವನೀಗ ಗುಂಪಿನಿಂ
ಹೊರಟ. "ಹಾಗಾದರೆ ಸಂದೇಶ ಕಳುಹಿಸಲು ವಿದ್ಯುತ್ ಸಂಕೇ
ಬಳಸಬಹುದು." ಇನ್ನು ಅವನಿಗೆ ಕನಸು ಕಾಣಲು ಅವಕಾಶವಿಲ್ಲ
ತನ್ನ ಕೋಣೆಗೆ ಊಟ ತಿಂಡಿಗಳನ್ನು ತರಿಸಿಕೊಂಡ. ವಿದ್ಯುತ್ತಿ
ಗುಣಗಳನ್ನು ಗುರುತು ಹಾಕಿಕೊಂಡ. ತಾನು ಎಂದೋ ಓದಿದ್ದ
ವಿದ್ಯುತ್ತಿನ ವಿಷಯಗಳನ್ನು ನೆನೆಸಿಕೊಂಡ.

ಅಂದು ವಿದ್ಯುತ್ತಿನ ಬಗ್ಗೆ ಪಾಠ ನಡೆಯುತ್ತಿದ್ದಾಗ ಒಂದು ಹಡಗಿನ ಚಿತ್ರ ಬರೆದಿದ್ದ. ಇಂದು ಹಡಗಿನಲ್ಲಿ ಕುಳಿತು ವಿದ್ಯುತ್ತಿನ ಗುಣಗಳನ್ನು ಪಟ್ಟಿಮಾಡಿದ.

1 ವೋಲ್ಟನ ವಿದ್ಯುತ್‌ಕೋಶದಿಂದ ವಿದ್ಯುತ್ತನ್ನು ಪಡೆಯಬಹುದು.

2 ತಂತಿಯ ಮೂಲಕ ವಿದ್ಯುತ್ತನ್ನು ಕಳಿಸಬಹುದು.

3 ಎಷ್ಟು ಉದ್ದದ ತಂತಿಯಾದರೂ, ವಿದ್ಯುತ್ ಅದರ ಉದ್ದಕ್ಕೂ ತಕ್ಷಣವೇ ಹರಿಯುತ್ತದೆ.

4 ಎಲ್ಲಿಯೋ ಒಂದು ಕಡೆ ತಂತಿ ಕಡಿದರೆ ಇಡೀ ತಂತಿಯಲ್ಲಿ ವಿದ್ಯುತ್ ಇಲ್ಲವಾಗುತ್ತದೆ.

ಯಾವುದಾದರೂ ಸಾಧನದಿಂದ ವಿದ್ಯುತ್ತನ್ನು ತಡೆದು ತಡೆದು ಕಳಿಸಿದರೆ ಅದು ವಿದ್ಯುತ್ ಸಂಕೇತವಾಗುತ್ತದೆ.

1 ವಿದ್ಯುತ್ ಸಹಾಯದಿಂದ ಒಂದು ಕಬ್ಬಿಣದ ತುಂಡನ್ನು ತಾತ್ಕಾಲಿಕವಾದ ಅಯಸ್ಕಾಂತವನ್ನಾಗಿ ಮಾಡಬಹುದು.

2 ಈ ಅಯಸ್ಕಾಂತ, ಕಬ್ಬಿಣದ ತುಂಡನ್ನು ಆಕರ್ಷಿಸಬಲ್ಲುದು. ವಿದ್ಯುತ್ ಅನ್ನು ನಿಯಂತ್ರಿಸಿ, ಬೇಕಾದ ಹಾಗೆ ಅಯಸ್ಕಾಂತವನ್ನು ಬಳಸಿಕೊಂಡರೆ, ಅದು ಸಣ್ಣ ಕಬ್ಬಿಣದ ತುಂಡನ್ನು ಎಳೆದು ಬಿಟ್ಟು ಮಾಡಬಹುದು. ಹೀಗೆ ಮಾಡಿದಾಗ ಶಬ್ದ ಉತ್ಪತ್ತಿಯಾಗುತ್ತದೆ. ಅಂದರೆ ವಿದ್ಯುತ್ತನ್ನು ಬೇಕಾದ ಹಾಗೆ 'ಸದ್ದುಮಾಡಲು' ಬಳಸಬಹುದು.

ಹಡಗು ಅಮೇರಿಕವನ್ನು ತಲುಪುತ್ತಿದ್ದ ಹಾಗೆ ಅವನ ಕಲ್ಪನೆಗೆ ಒಂದು ಸ್ಪಷ್ಟ ರೂಪ ಮೂಡಿತು. ದೂರದಲ್ಲಿ ಕಾಣುತ್ತಿರುವ ದಡವನ್ನೇ ದಿಟ್ಟಿಸಿ ನೋಡುತ್ತಿದ್ದ. ಅವನಿಗೆ ಈಗ ಬೇಗ

ದಡವನ್ನು ಸೇರಬೇಕಾಗಿತ್ತು. ಅವನ ದೃಷ್ಟಿ, ದೂರವನ್ನು ಕಡಿ
ಮಾಡುವಂತಿದ್ದರೆ! ಅವನ ಚಿಕ್ಕಂದಿನ ಅವಸರ ಪ್ರಜ್ಞೆ ಪ್ರ
ಮೂಡಿತು. ಬೇಗ ಊರು ತಲುಪಬೇಕು. ಬೇಗ ಪ್ರಯೋ
ಮಾಡಬೇಕು. ಬೇಗ ಸಂದೇಶ ವಾಹಕವನ್ನು ಜೋಡಿಸಬೇಕ
ಬೇಗ . . . ಬೇಗ. ತನ್ನ ತಂದೆ ಹೇಳುತ್ತಿದ್ದ ಆಮೆ ಮೊ
ಸ್ಪರ್ಧೆಯ ಕಥೆ, ನೆನಪಿಗೆ ಬಂದು, ಅವನ ಭಾವನೆಗೆ, ಕಲ್ಪನ
ಕಡಿವಾಣ ಹಾಕಿತು.

ಹಡಗು ನಿಲ್ಲುತ್ತಿದ್ದ ಹಾಗೆ, ನಾವಿಕ ಬಂದು "ನೀ
ಒಳಗೇ ಸೇರಿಕೊಂಡು ಏನು ನಡೆಸುತ್ತಿದ್ದೀರಿ?" ಎಂದು ಕೇಳಿದ

"ಎಂದಾದರೂ, ಫಿನ್ಲೆ ಮೋರ್ಸ್‌ನ ಶೀಘ್ರ ಸಂದೇ
ವಾಹಕದ ಬಗ್ಗೆ ಕೇಳಿದರೆ ಅದು ರೂಪುಗೊಂಡುದು ನಿನ್ನ ಹಡ
ನಲ್ಲಿ ಎಂದು ನೆನೆಸಿಕೊ" ಎಂದಷ್ಟೇ ಹೇಳಿ ಸರಸರನೆ ಹೊರಟ.

೫

ಕಲಾವಿದನಾಗಿ, ಕಲಾವೀಕ್ಷಕನಾಗಿ ಯೂರೋಪಿ
ಹೊರಟ ಫಿನ್ಲೆ ಮೋರ್ಸ್ ವಿಜ್ಞಾನ ಪ್ರಯೋಗ ನಿರತನಾ
ತಾಯ್ನಾಡಿಗೆ ಮರಳಿದ. ಅವನಿಗಿನ್ನು ತನ್ನ ವರ್ಣಚಿತ್ರಗಳ ಬ
ತನ್ನ ಕಲೆಯ ಬಗ್ಗೆ ಯಾವ ಚಿಂತೆಯೂ ಇರಲಿಲ್ಲ. ಅವ
ಮನಸ್ಸೆಲ್ಲಾ ತಂತಿಗಳು, ವಿದ್ಯುತ್, ಅಯಸ್ಕಾಂತ, ಕಬ್ಬಿಣ
ತುಂಡು, ವಿದ್ಯುತ್‌ಕೋಶ ಇವುಗಳಿಂದ ತುಂಬಿಕೊಂಡಿತ್ತು.

ಅವನ ಯೋಚನೆಗಳನ್ನೂ, ಯೋಜನೆಗಳನ್ನೂ ಕೇಳಿ
ಅವನ ತಮ್ಮಂದಿರು ಆಶ್ಚರ್ಯಪಟ್ಟರು. ಪುಟ್ಟ ಅಣ್ಣ ಫಿನ್ಲೆಗ
ಬೆಳೆದ ಅಣ್ಣ ಫಿನ್ಲೆಗೂ ವ್ಯತ್ಯಾಸ ಕಾಣದೆ ಕಂಗಾಲಾದರು.

"ಆದರೆ ನಿನ್ನ ಕುಂಚ, ಬಣ್ಣಗಳ ವಿಷಯ ಏನು?"

“ಅದನ್ನು ಬಿಡುವುದಿಲ್ಲ. ಬಿಡುವಿನ ವೇಳೆಯಲ್ಲಿ ಚಿತ್ರ ಬರೆದು, ನನ್ನ ಖರ್ಚನ್ನಂತೂ ತುಂಬಿಕೊಳ್ಳುತ್ತೇನೆ.”

“ಆದರೆ ಅಣ್ಣಾ ಈಗ ಕಾಲ ಅಷ್ಟು ಸುಗಮವಾಗಿಲ್ಲ. ನಿನ್ನಂತಹ ಚಿತ್ರಕಾರರು ಈಗ ಇಲ್ಲಿ ಬಹಳ ಜನರಿದ್ದಾರೆ. ನೀನು ಒಂದು ಉದ್ಯೋಗ ಹಿಡಿದರೆ ಒಳ್ಳೆಯದು.”

“ಅದೆಲ್ಲ ಬೇಡ. ಆಮೇಲೆ ನನಗೆ ಸಮಯ ಸಾಲದೆ ಕೆಲಸ ನಿಂತು ಹೋಗುತ್ತದೆ.”

ಕೆಲಸಕ್ಕೆ ಅಣ್ಣನನ್ನು ಒಪ್ಪಿಸಲಾಗದ ತಮ್ಮಂದಿರು, ಅವನಿಗೆ ಒಂದು ಕೋಣೆಯನ್ನು ಬಿಟ್ಟು ಕೊಟ್ಟರು. ಅದರ ತುಂಬ ತಂತಿಗಳು ಕೋಶಗಳು ಕಬ್ಬಿಣದ ತುಂಡುಗಳೇ ಇದ್ದವು.

ಒಂದು ಕಲಾಶಾಲೆಯ ಅಧ್ಯಾಪಕನ ಕೆಲಸ ಒಪ್ಪಿಕೊಳ್ಳಬೇಕೆಂದು ಬಲವಂತ ಮಾಡಲು ಬಂದಿದ್ದ ಅವನ ಗೆಳೆಯರು, ಅವನ ಕುಂಚದ ಮೇಲಿದ್ದ ಧೂಳನ್ನು ನೋಡಿ ದುಃಖಪಟ್ಟರು. ಆದರೆ ಅವನಿಗೆ ಕೆಲಸ ಒಪ್ಪಿಸಿ, ಒಂದಷ್ಟು ಶಿಷ್ಯರ ಮಧ್ಯೆ ಅವನನ್ನು ಕೂರಿಸಬೇಕಾದರೆ ಅವರ ಕಲಿತ ಬುದ್ಧಿ ಎಲ್ಲ ವ್ಯಯವಾಗಬೇಕಾಯಿತು.

ಕಲಾಶಾಲೆಯ ಕೆಲಸಕ್ಕೂ, ತನ್ನ ಪ್ರಯೋಗಕ್ಕೂ ಒಟ್ಟಿಗೆ ಅವನಿಗೆ ಮನಸ್ಸು ಕೊಡಲು ಸಾಧ್ಯವಾಗಲಿಲ್ಲ. ಐದು ವರ್ಷ ಕಳೆದರೂ ಅವನ ಹೊಸಯೋಜನೆ ಅಂಬೆಗಾಲನ್ನು ಇಡಲಿಲ್ಲ. ಸ್ವತಃ ಯಂತ್ರಗಳನ್ನು ಮಾಡದೇ ಅವನಿಗೆ ಬಹಳ ತೊಂದರೆಯಾಗುತ್ತಿತ್ತು. ಸಣ್ಣಪುಟ್ಟ ಬಸಲಾವಣೆಗಳಿಗೆ ವಾರಗಳವರೆಗೆ ಕಾಯಬೇಕಾಗುತ್ತಿತ್ತು. ಒಬ್ಬ ಯಂತ್ರಶಿಲ್ಪಿಯನ್ನು ನೇಮಿಸಿಕೊಳ್ಳುವ ಆವಶ್ಯಕತೆ ಉಂಟಾಯಿತು. ಆದರೆ ಅದಕ್ಕೆ ತಕ್ಕಂತಹ ಸಂಪಾದನೆಯಾಗಲು ಕಾಯಬೇಕು.

ಅಷ್ಟರಲ್ಲಿ ಅಲ್ಲೊಂದು, ಇಲ್ಲೊಂದು ಸುದ್ದಿ ಬರುತ್ತಿತ್ತು. ಜರ್ಮನಿಯಲ್ಲಿ ಒಂದೊಂದು ಅಕ್ಷರಕ್ಕೆ ಒಂದೊಂದು ತಂತಿಯಂತೆ ಗೊತ್ತುಮಾಡಿ ಇಪ್ಪತ್ತಾರು ತಂತಿಗಳನ್ನು ಉದ್ದಕ್ಕೂ ಹಾಕಿದ್ದಾರೆ. ಇಲ್ಲಿ ಒಂದು ಅಕ್ಷರ ಒತ್ತಿದರೆ, ಅಲ್ಲಿ ಮತ್ತೊಂದು ತುದಿಯಲ್ಲಿ ಅದರ ದೀಪ ಹತ್ತುತ್ತದೆ. ಆ ರೀತಿಯಲ್ಲಿ ಸಂದೇಶ ಕಳುಹಿಸಬಹುದು. ಆದರೆ ಫಿನ್ಲೆಗೆ ಈ ವಿಧಾನ ಸಮರ್ಪಕ ಎನಿಸಲಿಲ್ಲ.

ಜೋಸೆಫ್ ಹೆನ್ರಿ ಎಂಬ ಶಾಲೆಯ ಉಪಾಧ್ಯಾಯ, ಒಂದು ವಿದ್ಯುತ್ ಗಂಟೆಯುನ್ನು ಕಂಡುಹಿಡಿದಿದ್ದಾನೆ ಎಂದು ತಮ್ಮ ಹೇಳಿದಾಗ ಫಿನ್ಲೆಗೆ ಅದರ ಬಗ್ಗೆ ಯಾವ ಯೋಚನೆಯೂ ಆಗಲಿಲ್ಲ. ಅವನ ತಂತಿವಾಹಕ ಮುಗಿದರೆ ಅದು ಇವು ಎಲ್ಲವನ್ನೂ ಮೀರಿ ನಿಲ್ಲುವ ಭರವಸೆ ಅವನಿಗಿತ್ತು. ಆದರೆ ಅದು ಮುಗಿಯುವುದು ಎಂದು?

ಈ ಮಧ್ಯೆ ಹಣಕ್ಕಾಗಿ ಅವನು ಚಿತ್ರ ಬರೆಯಲೇ ಬೇಕಾಗಿತ್ತು. ಅಂದು ಅವನು ಬೋಸ್ಟನ್ನಿಗೆ ಹೊರಡಬೇಕಾಯಿತು. ತನ್ನ ತಂತಿಗಳ ಜೊಂಪೆಗೂ, ಕಬ್ಬಿಣದ ತುಂಡುಗಳಿಗೂ 'ಬೇಗ ಬರುವುದಾಗಿ' ಹೇಳಿ ಹೊರಟ. ಅವನ ಗೆಳೆಯರಿಗೂ ಈಗ 'ಅದರ' ಬಗ್ಗೆ ಕುತೂಹಲ ಉಂಟಾಗಿತ್ತು. ಅವರು ಅವನು ಹಿಂತಿರುಗುವುದನ್ನೇ ಕಾದರು.

"ಫಿನ್ಲೆ ಈಗ ಒಬ್ಬ ಸಹಾಯಕನನ್ನು ನೇಮಿಸಿಕೊಂಡು ನಿನ್ನ ಕಾರ್ಯವನ್ನು ಪುನಃ ಆರಂಭಿಸು" ಎಂದು ಅವನಿಗೇ ಅವಸರಿಸಿದರು.

"ಹಣ ಇದ್ದರೆ ಅದೇ ಮೊದಲನೆಯ ಕೆಲಸ"

"ಈಗ ಜನರನ್ನು ಸೇರಿಸಿ, ಎಲ್ಲರಿಗೂ ವಿಷಯ ವಿವರಿಸೋಣ.

ಒಂದು ಸಣ್ಣ ಪ್ರಯೋಗವನ್ನೂ ಮಾಡಿ ತೋರಿಸೋಣ. 40ಜನ ಸೇರಿದರೆ, ಒಂದು ಇಪ್ಪತ್ತು ಜನ ನಂಬಬಹುದು. ಒಂದು ಹತ್ತು ಜನ ಹಣ ಕೊಡಲು ಅಥವಾ ಅವರ ಹಣವನ್ನು ಈ ಹೊಸ ಉದ್ಯಮದಲ್ಲಿ ತೊಡಗಿಸಲು ಮುಂದೆ ಬರಬಹುದು."

ಫಿನ್ಲೆಯ ಆಸೆ ಮತ್ತೆ ಚಿಗುರಿತು. "ಹೌದು. ತಂತಿ ಉದ್ದವಾಗಿದ್ದರೆ ಅವರಿಗೆ ನಂಬಿಕೆ ಬರಬಹುದು"

"ಸರಿಯಾದ ಮಾತು. ಮೂರು ಮೈಲಿ ಉದ್ದದ ತಂತಿ ತೆಗೆದುಕೊಂಡು ಪ್ರಯೋಗಕ್ಕೆ ತಯಾರು ಮಾಡಿಕೊಬೇಕು."

ತನ್ನ ಚಿತ್ರದ ಕೆಲಸಗಳನ್ನು ಬದಿಗಿಟ್ಟ. "ಜನ ಬಂದು, ತನ್ನ ಪ್ರಯೋಗ ನೋಡಿ ಹಣ ಕೊಟ್ಟರೆ, ಒಬ್ಬ ಸಹಾಯಕನನ್ನು ನೇಮಿಸಿಕೊಳ್ಳಬಹುದು. ಆಗ ಈ ಚಿತ್ರಗಳನ್ನು ಪೂರೈಸಲು ಸಮಯ ಸಿಗುತ್ತದೆ."

ತಂತಿಗಳನ್ನು ಎಳೆದು ಹಿಡಿದುಕೊಳ್ಳಲು ಆದರ ಸುತ್ತಲೂ ಅವಾಹಕವನ್ನು ಸುತ್ತಲು ಅವನ ಗೆಳೆಯ ಸಹಾಯಮಾಡಿದ. ಒಂದೊಂದು ಕೆಲಸದಲ್ಲಿಯೂ ಸ್ನೇಹದಿಂದ, ಸೌಹಾರ್ದದಿಂದ ಸಹಕರಿಸಿದ ಗೆಳೆಯನನ್ನು ಫಿನ್ಲೆ ಬಾರಿಬಾರಿಗೂ ವಂದಿಸಿದ. "ನಿನ್ನ ನಿಸ್ವಾರ್ಥ ಸಹಾಯದಿಂದ ನಿನ್ನ ಹಾರೈಕೆ ಫಲಿಸಲಿ. ಜನ ಇದರಲ್ಲಿ ಹಣ ತೊಡಗಿಸಲಿ. ಇದರಲ್ಲಿ ಜಯ ಲಭಿಸಿದರೆ, ಅದರಲ್ಲಿ ನಿನಗೂ ಪಾಲುಂಟು" ಎಂದು ಫಿನ್ಲೆ ಸಂಭ್ರಮದಿಂದ ಅಡ್ಡಾಡಿದ.

ಮೂರು ತಿಂಗಳಲ್ಲಿ ಪ್ರಯೋಗಕ್ಕೆ ಕಣ ಸಿದ್ಧವಾಯಿತು. ಅವನ ಪುಟ್ಟ ಕೋಣೆಯ ತುಂಬ ಜನ ಸೇರಿದರು. ನಡುಗುವ ಕೈಗಳನ್ನು ಹಿಂದಿಟ್ಟುಕೊಂಡು ಫಿನ್ಲೆ ಆರಂಭಿಸಿದ "ನಾನೀಗ ವಿದ್ಯುತ್ಕಾಂತದ ಒಂದು ಗುಣವನ್ನು ಪ್ರದರ್ಶಿಸುತ್ತೇನೆ."

" ಏನೋ ಒಂದು, ನೋಡೋಣ " ಒಬ್ಬ ದಪ್ಪ ವ್ಯಾಪಾ
ಅಟ್ಟಹಾಸದಿಂದ ಹೇಳಿದ.

ತನ್ನ ನಿರಾಸೆಯನ್ನು ಹತ್ತಿಕ್ಕಿಕೊಂಡು ಫಿನ್ಲೆಯೂ ನಕ
" ಈ ಪ್ರಯೋಗದಿಂದ ಸಂದೇಶಗಳನ್ನು ಎಷ್ಟು ಸರಾಗವಾ
ದೂರದೂರಕ್ಕೆ ಕಳುಹಿಸಬಹುದು ಎಂದು ತೋರಿಸುತ್ತೇನೆ.
ವ್ಯವಸ್ಥೆ ಫ್ರಾನ್ಸಿನ ಸೆಮಾಫೋರ್‌ಗಿಂತ ಉತ್ತಮವಾದುದ
ಅದು ಬಹಳ ನಿಧಾನ. ಇದು ಮಿಂಚಿನ ವೇಗದಲ್ಲಿ ಕೆಲ
ಮಾಡುತ್ತದೆ. ಮಳೆ ಇದ್ದರೂ, ಹಿಮ ಬೀಳುತ್ತಿದ್ದರೂ ಇ
ತನ್ನ ಕೆಲಸವನ್ನು ಸಮರ್ಪಕವಾಗಿ ಮಾಡುತ್ತದೆ. ಇಲ್ಲಿ ನೋ
ಈ ರಾಟೆಯಲ್ಲಿ ಮೂರು ಮೈಲಿ ಉದ್ದದ ತಂತಿ ಇದೆ.
ಕೊನೆಯಲ್ಲಿ ವಿದ್ಯುತ್‌ಕೋಶವಿದೆ. ಆ ಕೊನೆಯಲ್ಲಿ ಒಂ
ವಿದ್ಯುತ್ ಆಯಾಸ್ಕಾಂತವಿದೆ. ಇಲ್ಲಿ ನಾನು ವಿದ್ಯುತ್‌ನ್ನು ನಿ
ಸಿದರೆ ಆ ಕೊನೆಯಲ್ಲಿ, ಆಯಸ್ಕಾಂತದ ಮುಂದೆ ಇರುವ ಕಬ್ಬಿ
ಅಲ್ಲಾಡುತ್ತದೆ" ಮಾತನಾಡುತ್ತಾ ಫಿನ್ಲೆ ಪ್ರಯೋಗ ಮಾ
ತೋರಿಸಿದ.

ಅಲ್ಲಿ ನೆರೆದಿದ್ದ ಜನ ಅಚ್ಚರಿಗೊಂಡರು. ಆದರೆ ಆ ದ
ವ್ಯಾಪಾರಿ "ಆಟ ಚನ್ನಾಗಿದೆ" ಎಂದಾಗ ಎಲ್ಲರೂ ಭುಜ ಕು
ಸುತ್ತಾ ನಕ್ಕು ಸಂತಸ ಪಟ್ಟರು.

ಫಿನ್ಲೆಗೆ ತನ್ನ ಎಳೆತನದ ನೆನಪಾಯಿತು. ವಿದ್ಯುತ್ ಬ
ಅವನ ಗುರುಗಳು ಹೇಳಿದಾಗ ಅವನೆಂದುಕೊಂಡ ಮಾತುಗ
ನೆನಪಾಯಿತು. ಈಗ ಅವರ ಜೊತೆಗೆ ಅವನೂ ನಕ್ಕ. "ನಿಮ
ಬೇಕಾದ ಸಂದೇಶವನ್ನು ಹೇಳಿ, ಅದನ್ನು ಇಲ್ಲಿಂದ ಕಳಿಸಿದ
ಅದು ಆ ಕೊನೆಯನ್ನು ತಲುಪುತ್ತದೆ."

"ಅಹಾ! ಇದೊಂದು ತರಹ ನಾಟಕ. ನಾನು ಹೇ

ಸಂದೇಶ ಆ ಕೊನೆಯಲ್ಲಿರುವವರಿಗೂ ಕೇಳಿಸುತ್ತದೆ. ಅದೇನು ಮಹಾ ನಿಮ್ಮಿಬ್ಬರ ಮಧ್ಯೆ ಏನೋ ಇದೆ ಅಷ್ಟೆ." ಆ ದಪ್ಪ ವ್ಯಾಪಾರಿ ಹಿಯಾಳಿಸಿದ.

ಫಿನ್ಲೆ ಮೋರ್ಸ್ ಸಹನೆ ಕಳೆದುಕೊಳ್ಳಲಿಲ್ಲ. ಅದು ನಾಟಕ ವಲ್ಲ ಎಂದು ಅವನಿಗೆ ತಿಳಿಯಪಡಿಸುವ ವಿಧಾನವನ್ನು ಯೋಚನೆ ಮಾಡಿದ.

"ಒಂದು ಸಂದೇಶವನ್ನು ಬರೆದುಕೊಡಿ. ನಾನು ಅದನ್ನು ಸಂಕೇತಗಳಲ್ಲಿ ಕಳಿಸುತ್ತೇನೆ. ಆ ಕೊನೆಯಲ್ಲಿರುವ ನನ್ನ ಗೆಳೆಯ ಅದನ್ನು ಬರೆದುಕೊಂಡು ಓದುತ್ತಾನೆ. ಆಗ ನೀವೇ ವ್ಯವಸ್ಥೆಯ ಹಿರಿಮೆಯನ್ನು ಅರ್ಥಮಾಡಿಕೊಳ್ಳಬಹುದು."

ಅಪನಂಬಿಕೆಯಿಂದಲೇ ಅವನು ಒಂದು ಚೂರು ಕಾಗದದಲ್ಲಿ ಒಂದೆರಡು ಪದಗಳನ್ನು ಗೀಚಿ ಫಿನ್ಲೆಗೆ ಕೊಟ್ಟ.

ಫಿನ್ಲೆ, ಆ ತುದಿಯಲ್ಲಿದ್ದ ಗೆಳೆಯನಿಗೆ ಸನ್ನೆ ಮಾಡಿ, ತನ್ನ ವಿದ್ಯುತ್‌ಕಾಂತದ ಮುಂದೆ ಕುಳಿತ. ಒಂದೊಂದೇ ಅಕ್ಷರ ಗಳನ್ನು ತಂತಿಯ ಮೂಲಕ—ಸನ್ನೆಯಿಂದ ಕಳುಹಿಸಿದ. ಆ ತುದಿಯಲ್ಲಿ ಅವನ ಗೆಳೆಯ ತನ್ನ ಮುಂದೆ ಕುಣಿಯುತ್ತಿರುವ ಕಬ್ಬಿಣದ ತುಂಡಿಗೆ ಅನುಗುಣವಾದ ಅಕ್ಷರಗಳನ್ನು ಬರೆದು ಕೊಂಡ.

ಫಿನ್ಲೆ ನಿಲ್ಲಿಸಿದ ಕೂಡಲೆ ಆ ತುದಿಯ ತುಂಡೂ ಸಮ್ಮನೆ ಕುಳಿತಿತು. ಸಂದೇಶ ಮುಗಿಯಿತು. ಅವನ ಗೆಳೆಯ ಆ ಪದಗಳನ್ನು ಜೋರಾಗಿ ಓದಿದ! ಆಶ್ಚರ್ಯ! ಅವೇ ಪದಗಳು! ಸಂತೋಷದ ಭರದಲ್ಲಿ ತನ್ನ ಭಾರವನ್ನು ತಿಳಿಯದೇ ದಪ್ಪವ್ಯಾಪಾರಿ ಚಪ್ಪಾಳೆ ತಟ್ಟಿಕೊಂಡು ಕುಣಿದಾಡಿದ. ಇಡೀ ಜನಸಮೂಹ ಹರ್ಷದಿಂದ ಚಪ್ಪಾಳೆ ತಟ್ಟಿತು.

ಆ ವ್ಯಾಪಾರಿ ಬೆವರೊರೆಸಿಕೊಳ್ಳುತ್ತಾ "ಮೂರು ಮೈಲಿ
ಗಿಂತ ಹೆಚ್ಚು ದೂರಕ್ಕೆ ಸಂದೇಶ ಕಳಿಸಬೇಕಾದರೆ . . . ?"

"ಆಗ ಮಧ್ಯೆ ಮಧ್ಯೆ ವರ್ಧಕಗಳನ್ನು ಉಪಯೋಗಿಸ
ಬೇಕು. ಅಂದರೆ . . . ." ಅವನ ವಿವರಣೆ ವ್ಯಾಪಾರಿಗೆ ಬೇಕಾಗಿರ
ಲಿಲ್ಲ. "ಅದೆಲ್ಲ ನನಗೆ ಅರ್ಥವಾಗುವುದಿಲ್ಲ." ನನಗೆ ಅರ್ಥವಾಗು
ವುದು ಬರಿಯ ಲಾಭ ನಷ್ಟ ಅಷ್ಟೆ. ಅಂತು ನಿಮ್ಮ ಕಾರ್ಯಕ್ರಮ
ಚೆನ್ನಾಗಿತ್ತು. ಸ್ವಲ್ಪ ಹೊತ್ತು ತಮಾಷೆಯಾಗಿ ಕಳೆದೆವು.
ವಂದನೆಗಳು" ಎಂದು ಹೇಳಿ ಕಾಲುಕಿತ್ತ. ಅವನ ಹಿಂದೆಯೇ
ನಗುತ್ತಾ ಎಲ್ಲರೂ ಹೊರಟರು.

ಫಿನ್ಲೆಯೂ, ಅವನ ಆತ್ಮೀಯ ಗೆಳೆಯ ಲಿಯನಾರ್ಡ್
ಗಾಲೆಯೂ ಅಲ್ಲಿಯೇ ಕುಸಿದು ಕುಳಿತರು. ವಾರಗಟ್ಟಲೆ ಅವರು
ಪಟ್ಟಪ್ರಯತ್ನ ಬರಿಯ 'ತಮಾಷೆ'ಯಲ್ಲಿ ಪರ್ಯವಸಾನ
ವಾಯಿತು.

"ನಿನ್ನ ಅಮೂಲ್ಯ ಸಮಯವೆಲ್ಲ ಹಾಳಾಯಿತು ಗಾಲೆ,
ಕ್ಷಮಿಸು" ಎಂದು ಫಿನ್ಲೆ ಗೆಳೆಯನ ಕೈಹಿಡಿದು ದುಃಖಿಸಿದ.

"ನನ್ನ ಕೆಲಸ ! ನೀನು ಮಾಡಿದ್ದು? ನಾನು ಈಗ ಕೆಲವು
ವಾರ ನಿನಗೆ ಸಹಾಯ ಮಾಡಿದೆ. ನೀನು ಐದು ವರ್ಷದಿಂದ
ಅದಕ್ಕಾಗಿಯೇ ದುಡಿಯುತ್ತಿದ್ದೆಯಲ್ಲ. ಈಗೇನು ಮಾಡುವೆ ?"

ಫಿನ್ಲೆಗೆ ತನ್ನ, ಇಂಗ್ಲೆಂಡಿನ ಕಲಾಶಾಲೆಯ ಅಧ್ಯಕ್ಷರ
ನೆನಪಾಯಿತು. "ಚನ್ನಾಗಿದೆ. ಈಗ ಮುಗಿಸಿಬಿಡಬಹುದು."
ಎಷ್ಟು ಬಾರಿ ಇವೇ ಮಾತನಾಡಿ, ಅವನಿಗೆ ಸಹನೆಯನ್ನೂ, ಚಿತ್ರ
ಕಲೆಯ ಸೂಕ್ಷ್ಮವನ್ನೂ ಕಲಿಸಿದ್ದರು !

"ನಾನೀಗ ಸಾಕಷ್ಟು ಹಣ ಸಿಗುವವರೆಗೆ ಕಾಯುತ್ತೇನೆ."

"ಹೇಗೆ ?"

ಬಾಗಿಲಿನಲ್ಲಿ ಸದ್ದಾಯಿತು. ಇಂತಹ ನಿರಾಸೆಯ ಭಾವದಲ್ಲಿ ಯಾರನ್ನೂ ನೋಡುವುದು ಗಾಲೆಗೆ ಬೇಕಾಗಿರಲಿಲ್ಲ. ಆದರೆ ಫಿನ್ಲೇ ಆಗಂತುಕನನ್ನು ಹಿಂದಕ್ಕೆ ಕಳಿಸಲು ಒಪ್ಪಲಿಲ್ಲ. ಅವನೆಷ್ಟಾದರೂ ಶಿಕ್ಷಕ. ಶಿಷ್ಯರನ್ನು ಯಾವ ಗಳಿಗೆಯಲ್ಲೂ ಸ್ವಾಗತಿಸುವ ವಿಶಾಲ ಹೃದಯಿ.

"ನನ್ನ ಶಿಷ್ಯರಿರಬಹುದು. ಒಳಗೆ ಬರಹೇಳು" ಎಂದ. ಬಂದವನು ಆಲ್ಫ್ರೆಡ್ ವೇಲ್. ಫಿನ್ಲೆ ಕಲಿಸುತ್ತಿದ್ದ ಕಾಲೇಜಿನಲ್ಲಿ ಬೇರೆ ವಿಷಯವನ್ನು ಕುರಿತು ಓದುತ್ತಿದ್ದ ವಿದ್ಯಾರ್ಥಿ.

"ನಾನು ನಿಮ್ಮ ಪ್ರಯೋಗ ಪ್ರದರ್ಶನಕ್ಕೆ ಬಂದಿದ್ದೆ. ನೀವು ಹೇಳಿದ ವರ್ಧಕಗಳ ವಿಷಯ, ನಿಮಗೆ ತೊಂದರೆಯಾಗದಿದ್ದರೆ, ವಿವರಿಸುತ್ತೀರಾ?" "ಓ ಧಾರಾಳವಾಗಿ. ಒಂದು ಕುದುರೆ ಗಾಡಿ ವಾಷಿಂಗ್ಟನ್ ಇಂದ ಬಾಲ್ಟಿಮೋರ್‌ಗೆ ಹೋಗುತ್ತಿದೆ ಎಂದುಕೊ. 40 ಮೈಲಿಗಳಿವೆ. ಅಷ್ಟು ದೂರವನ್ನೂ ಒಂದೇ ಜೊತೆ ಕುದುರೆಗಳು ಓಡಿಮುಗಿಸಲಾರವು. ಆದಕ್ಕಾಗಿ ಅಲ್ಲಲ್ಲಿ ಕುದುರೆಗಳನ್ನು ಇಟ್ಟುಕೊಂಡಿರುತ್ತಾರೆ. ಕುದುರೆಗಳನ್ನು ಬದಲಾಯಿಸಿಕೊಂಡು ಗಾಡಿ 40 ಮೈಲಿಗಳನ್ನು ಕ್ರಮಿಸುತ್ತದೆ.

"ಹಾಗೆ. ನಾನು ಒಂದು ಕೋಶದಿಂದ ವಿದ್ಯುತ್ ತೆಗೆದುಕೊಂಡು ತಂತಿಯ ಮೂಲಕ ಕಳಿಸಿದರೆ ಅದು ಅಷ್ಟು ದೂರ ಹೋಗುವುದಿಲ್ಲ. ಅದರ ಶಕ್ತಿ ಕುಂದುತ್ತಾ ಹೋಗುತ್ತದೆ. ಆದರೆ ಕುಂದಿದ ವಿದ್ಯುತ್ ಒಂದು ಸ್ವಿಚನ್ನು ಅದುಮಿದರೆ, ಹೊಸ ಕೋಶದಿಂದ ವಿದ್ಯುತ್ ಹೊರಟು ಅದರೊಡನೆ ಮುಂದಕ್ಕೆ ಚಲಿಸುತ್ತದೆ. ಹಾಗೆ ಮುಂದುವರಿಯುತ್ತಾ ಕೊನೆ ಮುಟ್ಟುತ್ತದೆ." "ಅಂದರೆ, ಅಲ್ಲಲ್ಲಿ ಕೋಶಗಳನ್ನು ಚಾಲಿಸುತ್ತ ನಲ್ವತ್ತು ಮೈಲು ಸಾಗಲು ವಿದ್ಯುತ್ತಿಗೆ ಎಷ್ಟು ಕಾಲ ಬೇಕು?" ಪುನಃ ಆದೇ

ಸಮಸ್ಯೆ! "ಎಷ್ಟು ಕಾಲವೂ ಬೇಡ. ಈಗ ನೀನು ನೋಡಿದೆ
ಯಲ್ಲಾ ಹಾಗೆ, ತತ್‌ಕ್ಷಣದಲ್ಲಿಯೇ ಎಲ್ಲ ದೂರವನ್ನೂ ಕ್ರಮಿಸು
ತ್ತದೆ."

"ಅಧ್ಭುತವಾದ ವಿಚಾರ!"

"ಹತ್ತು ಮೈಲು ದೂರ ಸಂದೇಶ ಕಳಿಸುವುದೂ ಒಂದೇ;
ಪ್ರಪಂಚದ ಸುತ್ತಲೂ ತಂತಿ ಹಾಕಿ ಸಂದೇಶ ಕಳಿಸುವುದೂ
ಒಂದೇ–ಕಾಲಾವಕಾಶದ ಲೆಖ್ಖದಲ್ಲಿ."

ಆಲ್ಫ್ರೆಡ್ ವೇಲ್ ಸುತ್ತಲೂ ಕಣ್ಣಾಡಿಸಿದ. ತಂತಿಯ
ಸುರುಳಿ, ಸ್ವಿಚ್ ಎಲ್ಲ ಬಹಳ ದಪ್ಪ ದಪ್ಪವಾಗಿದ್ದವು. ಅವನ್ನು
ಇನ್ನೂ ನಾಜೋಕಾಗಿ, ಪುಟ್ಟದಾಗಿ ಮಾಡುವ ವಿಧಾನ ಅವನಿಗೆ
ತಕ್ಷಣವೇ ಹೊಳೆಯಿತು. ಅವನು ಯಂತ್ರಗಳೊಡನೆ ಕೆಲಸ
ಮಾಡುತ್ತಿದ್ದ. ಅದರಲ್ಲಿ ಪಳಗಿದ್ದ.

"ನನ್ನ ಹತ್ತಿರ ಹಣವಿಲ್ಲ . . . . ಆದರೆ ಕೆಲಸ ಮಾಡ
ಬಲ್ಲೆ. ನಿಮಗೆ ನನ್ನಿಂದ ಸಹಾಯವಾಗುವುದಾದರೆ, ನಿಮಗೆ
ಬೇಕಾದ ಉಪಕರಣವನ್ನು ಪುಟ್ಟದಾಗಿ, ನಾಜೋಕಾಗಿ, ಚನ್ನಾಗಿ
ಮಾಡಿಕೊಡುತ್ತೇನೆ. ನೀವು ನಕ್ಷೆ ಕೊಟ್ಟರೆ, ಉಪಕರಣ ಮಾಡಿ
ಕೊಡುವ ಹೊಣೆ ನನ್ನದು."

ಫಿನ್ಲೆಗೆ, ಹುಡುಕುವ ಬಳ್ಳಿ ಕಾಲಿಗೇ ತೊಡರಿದಂತೆ ಆಯಿತು.
ಹೊಸ ಉತ್ಸಾಹದಿಂದ, ಅವನ ಕೈಹಿಡಿದು ಕುಣಿದಾಡಿಬಿಟ್ಟ.
ಗೆಳೆಯ ಗಾಲೆಗೆ ಇದೊಂದು ಅಪೂರ್ವ ದೃಶ್ಯ!

೬

ಅಂದು ಹದಿನಾರು ವರ್ಷಗಳ ಹಿಂದೆ, ಇದೇ ಕೋಣೆಯಲ್ಲಿ,
ಶಾಸಕರ ಚಿತ್ರ ಬರೆಯಲು ಕುಳಿತಿದ್ದ. ಇಂದು ಅದೇ ರಾಜ

ಧಾನಿಯ, ಅದೇ ಕೋಣೆಯಲ್ಲಿ, ಸಹಾಯಕ ಆಲ್ಫ್ರೆಡ್‌ನೊಂದಿಗೆ, ಕಾಯುತ್ತ ಕುಳಿತಿದ್ದಾನೆ. ಅವನ ಉಪಕರಣಗಳು ಸಿದ್ಧವಾಗಿವೆ. ಶಾಸಕರಿಗೆ ಅದರ ಪ್ರದರ್ಶನ ಏರ್ಪಟ್ಟಿದೆ. ಅವರು ಒಪ್ಪಿದ ಮೇಲೆ, ಸಭೆಯಲ್ಲಿ ಆ ಬಗ್ಗೆ ಚರ್ಚೆ ನಡೆಯಬೇಕು. ಈಗ ಫಿನ್ಲೆಯ ಮನಸ್ಸೆಲ್ಲ, ಶಾಸಕರ ಮನಸ್ಸನ್ನು ಗೆಲ್ಲುವುದರ ಕಡೆ ಗಿದೆ. ಸರಸರನೆ ಕೋಣೆಯನ್ನು ಸ್ವಚ್ಛ ಮಾಡಿಸಿಕೊಂಡ. ತನ್ನ ಉಪಕರಣಗಳನ್ನು ಅಲ್ಲಿ ಹರಡಿಕೊಂಡು ಜೋಡಿಸಿಕೊಳ್ಳಲು ತೊಡಗಿದ. ಅಲ್ಲಿ ಬಟ್ಟೆಯಲ್ಲಿ ಸುತ್ತಿದ ಒಂದು ದೊಡ್ಡ ಆಕೃತಿ ಕಣ್ಣಿಗೆ ಬಿತ್ತು. ಕುತೂಹಲದಿಂದ ಅದನ್ನು ಬಿಚ್ಚಿ ನೋಡಿದ. ತಾನು ಎಂದೋ ಮಾಡಿದ್ದ, ಪ್ರಶಸ್ತಿಯನ್ನೂ ಕೀರ್ತಿಯನ್ನೂ ಆತ್ಮವಿಶ್ವಾಸವನ್ನೂ ತಂದುಕೊಟ್ಟಿದ್ದ ಹರ್‌ಕ್ಯುಲಿಸ್‌ನ ವಿಗ್ರಹ! ಅದರ ಒಂದು ಪ್ರತಿ ಈ ಸರಕಾರದ ವಶಕ್ಕೆ ಬಂದು ಕೋಣೆಯಲ್ಲಿ ಭದ್ರವಾಗಿ ಕುಳಿತಿತ್ತು. ತನ್ನ ಕೆಲಸದ ಆರಂಭದಲ್ಲಿ, ತನ್ನ ಪ್ರಶಸ್ತಿ ವಿಜೇತ ವಿಗ್ರಹ ಕಣ್ಣಿಗೆ ಬಿದ್ದದ್ದು ಅವನಿಗೆ ಶುಭಸೂಚನೆಯಂತೆ ಕಂಡಿತು. ಹೆಚ್ಚು ಹುರುಪಿನಿಂದ ತನ್ನ ಕೆಲಸವನ್ನು ಮುಂದು ವರೆಸಿದ. ಇಡೀ ಕೋಣೆಯಲ್ಲಿ ಅವನ ಉಪಕರಣಗಳು, ತಂತಿ ಗಳೂ, ಹರಡಿಕೊಂಡಿದ್ದವು. ಎಲ್ಲ ಸಿದ್ಧವಾದ ಮೇಲೆ ಒಂದೊಂದೇ ಶಾಸಕರ ಗುಂಪು ಬಂದು ನೋಡಿಕೊಂಡು ಹೋಯಿತು. ಆದರೆ ಅವರ ಮನಸ್ಸು ಫಿನ್ಲೆಗೆ ಅರ್ಥವಾಗಲಿಲ್ಲ. ಎಲ್ಲರೂ ಅವನ ಕೆಲಸವನ್ನು ಪ್ರಶಂಸೆ ಮಾಡಿದರು. ಒಳ್ಳೆಯ ಪ್ರಯೋಗಮಾಡಿ ತೋರಿದನೆಂದು ಬೆನ್ನು ತಟ್ಟಿದರು. ಫಿನ್ಲೆಗೆ ಬೇಕಾದ ಪ್ರತಿಕ್ರಿಯೆ ಯಾರಿಂದಲೂ ಬರಲಿಲ್ಲ.

"ಆರು ತಿಂಗಳಿನಿಂದ ಪಟ್ಟ ಕಷ್ಟ ವ್ಯರ್ಥವಾಗುವುದಲ್ಲ" ಎಂದು ಆಲ್ಫ್ರೆಡ್ ಚಿಂತಿಸಿದ.

ಫಿನ್ಲೆ ಅದಕ್ಕಾಗಿ ಆರು ತಿಂಗಳಲ್ಲ, ಆರು ವರ್ಷಗಳಿಂ
ಶ್ರಮಿಸಿದ್ದ. ಅವನ ಹಣ, ಕಾಲ, ಶಕ್ತಿ ಎಲ್ಲ ಇದಕ್ಕಾಗಿ ವ್ಯ
ವಾಗಿತ್ತು. ಅವನು ಚಿತ್ರ ಬರೆಯುವ ಕಾಲದಲ್ಲಿ, ಒಳ್ಳೆಯ
ಚಿತ್ರಗಳನ್ನು ಬರೆದು ಜನರನ್ನು 'ಕೊಂಡುಕೊಳ್ಳಿ' ಎಂದು
ಬೇಡಿಕೊಳ್ಳಬೇಕಾಗಿತ್ತು. ಇಂದು ಒಂದು ಒಳ್ಳೆಯ ವ್ಯವಸ
ಯನ್ನು ಕಂಡುಹಿಡಿದು, ಜನರನ್ನು 'ಅರ್ಥಮಾಡಿಕೊಳ್ಳಿ
ಎಂದು ಬೇಡಬೇಕು. ಕಲಾವಿದನಾದರೂ, ವಿಜ್ಞಾನಿಯಾದರ
ಅವನು ಭಿಕ್ಷುಕನೇ!

ಅವನ ದೀರ್ಘ ಚಿಂತನೆಗೆ ಅಡ್ಡಿ ಬಂದಹಾಗೆ, ಅಲ್ಲಿಯ
ವಾಣಿಜ್ಯ ಸಂಸ್ಥೆಯ ಮುಖ್ಯಸ್ಥ ಕೋಣೆಯೊಳಗೆ ನುಗ್ಗಿದ.

"ನಮಸ್ಕಾರ ಪ್ರೊ. ಮೋರ್ಸ್. ನೀವು ನಿಮ್ಮ ಈ
ಪ್ರಯೋಗಕ್ಕೆ ಸ್ವಾಮ್ಯ ಪಡೆದುಕೊಂಡಿದ್ದೀರಾ?"

"ಇಲ್ಲ, ಇನ್ನೂ ಈಗ ಅರ್ಜಿ ಹಾಕಿದ್ದೇನೆ. ದಿ
ದಿನಕ್ಕೂ ನನ್ನ ವ್ಯವಸ್ಥೆ ಉತ್ತಮಗೊಳ್ಳುತ್ತಿದೆ. ಆದ್ದರಿಂ
ಸ್ವಲ್ಪ ಕಾದು ನಂತರ ಸರಿಯಾಗಿ ಪ್ರಯತ್ನ ಮಾಡುತ್ತೇನೆ."

"ಅಂದರೆ ಈ ಬಗ್ಗೆ ಎಲ್ಲೂ ಪ್ರಚಾರ ಆಗಿಲ್ಲ ತಾನೆ?"

"ಇಲ್ಲ" ಫಿನ್ಲೆ ಉತ್ತರಿಸಿದಾಗ, ಆಲ್ಫ್ರೆಡ್ ಅನುಮಾನಿಸಿದ

'ಮಾರಿಸ್ ಪಟ್ಟಣದಲ್ಲಿ ಪ್ರಯೋಗ ಮಾಡಿದಾ
ಅಲ್ಲಿಯ ಸ್ಥಳೀಯ ಪತ್ರಿಕೆ ಈ ಬಗ್ಗೆ ಸ್ವಲ್ಪ ಸುದ್ದಿ ಪ್ರಕಟಿಸಿತ್ತು

"ಓ ಅದು ಪರವಾಗಿಲ್ಲ. ನೀವು ಈಗ ವಿದೇಶದಲ್ಲಿಯ
ಸ್ವಾಮ್ಯಕ್ಕಾಗಿ ಅರ್ಜಿ ಹಾಕಬಹುದು. ಇಂಗ್ಲೆಂಡಿನಲ್ಲಿ ಅಜಿ
ಹಾಕಿ. ನಿಮಗೆ ಒಳ್ಳೆಯದಾಗುತ್ತದೆ"

"ನಾವು ಆ ಬಗ್ಗೆ ಯೋಚನೆ ಮಾಡಿಲ್ಲ."

ಮುಖ್ಯಸ್ಥನಿಗೆ ಫಿನ್ಲೆಯ ಕಷ್ಟ ತಿಳಿಯಿತು. "ನಾನ

ನಿಮ್ಮ ಪ್ರಯೋಗದಲ್ಲಿ ಸ್ವಲ್ಪ ಹಣ ಕೂಡಿಸುತ್ತೇನೆ. ಅದನ್ನು ನಿಮ್ಮ ಪ್ರವಾಸಕ್ಕೆ ಬಳಸಿಕೊಳ್ಳಿ. ಆದರೆ ತಿಂಗಳಿಗೆ ಸಂಬಳ ಕೊಡಲಾರೆ. ಸ್ವಲ್ಪವೇ ಹಣದಲ್ಲಿ ನಿಮ್ಮ ಪ್ರವಾಸ, ಕೆಲಸ ಎಲ್ಲ ಮುಗಿಸಿಕೊಂಡು ಬನ್ನಿ. ಅಷ್ಟರಲ್ಲಿ ಇಲ್ಲಿಯೂ ಸ್ವಲ್ಪ ಕೆಲಸಮಾಡಿ, ನಿಮಗೆ ಇಲ್ಲಿಯ ಸ್ವಾಮ್ಯಕ್ಕೆ, ಹಣಕ್ಕೆ ಎಲ್ಲ ವ್ಯವಸ್ಥೆ ಮಾಡುತ್ತೇನೆ. ಆದರೆ ನಿಮಗೆ ಮೂರೇ ತಿಂಗಳು ಅವಕಾಶ ಕೊಡಲು ಸಾಧ್ಯ."

ಫಿನ್ಲೆಗೆ ಅಷ್ಟು ಸಿಕ್ಕಿದ್ದೆ ಹೆಚ್ಚು ಎನಿಸಿತು. ಜೂನ್ ತಿಂಗಳಿನ ಮೊದಲ ವಾರದಲ್ಲಿ ಇಂಗ್ಲೆಂಡಿಗೆ ಹೊರಟ. ತನ್ನ ಹಳೆಯ ಗೆಳೆಯರನ್ನು, ಕಲಾಶಾಲೆಯನ್ನು ಕಾಣುವ ಕಾತುರದಲ್ಲಿ ಅವನಿಗೆ ಸಮುದ್ರ ಪ್ರಯಾಣದ ದಣಿವೂ, ಬೇಸರವೂ ಗೋಚರಿಸಲೇ ಇಲ್ಲ. "ಏನೇನು ಚಿತ್ರಗಳನ್ನು ಬರೆದೆ?" ಎಂದಾಗ "ನಾನೀಗ ನನ್ನ ಹೊಸ ಸಂಶೋಧನೆಗೆ ಸ್ವಾಮ್ಯ ಪಡೆಯಲು ಬಂದಿದ್ದೇನೆ" ಎಂದರೆ ಅವರಿಗೆಷ್ಟು ಆಶ್ಚರ್ಯವಾದೀತು!

ಆದರೆ ಆಶ್ಚರ್ಯ ಅವನಿಗಾಗಿಯೇ ಕಾದಿತ್ತು. ಅವನ ಗೆಳೆಯ, "ಓಹ್. ಮೋರ್ಸ್. ನಿನ್ನ ನೋಡಿ ಬಹಳ ದಿನವಾಯಿತು. ಏನು ಬಂದೆ? ನಿನ್ನ ಚಿತ್ರಗಳ ಪ್ರದರ್ಶನ ಉಂಟೆ?" ಎಂದು ಕೇಳಿದ.

"ಇಲ್ಲ". ತನ್ನ ತಂತಿ ಪ್ರಯೋಗದ ಬಗ್ಗೆ ಬಂದಿರುವುದಾಗಿ ಫಿನ್ಲೆ ಮೋರ್ಸ್ ಹೇಳಿದ.

"ತಂತಿ ಸಂದೇಶ! ನಮ್ಮಲ್ಲಿ ಆಗಲೇ ಒಂದು ವಿಧಾನ ಚಾಲ್ತಿಯಲ್ಲಿದೆ." ಫಿನ್ಲೆ ತನಗುಂಟಾದ ಆಶ್ಚರ್ಯವನ್ನೂ, ನಿರಾಸೆಯನ್ನೂ ತಡೆದಿಟ್ಟುಕೊಂಡು, ಗೆಳೆಯನನ್ನೇ ಆ ವಿಧಾನದ ಬಗ್ಗೆ ಕೆಲವು ಪ್ರಶ್ನೆಗಳನ್ನು ಕೇಳಿದ. ಸ್ವಲ್ಪ ಸಮಾಧಾನವಾದಮೇಲೆ ನೇರವಾಗಿ ತಂತಿ ಕಚೇರಿಗೆ ಹೋದ. ಅಲ್ಲಿಯ ಅಧಿಕಾರಿ ಫಿನ್ಲೆ

ಮೋರ್ಸ್‌ನನ್ನು ಆದರದಿಂದ ಬರಮಾಡಿಕೊಂಡ. ಅವನಿ
ಬೇಕಾದ ಎಲ್ಲ ವಿವರಣೆಯನ್ನೂ ಒದಗಿಸಿದ. ಫಿನ್ಲೆಗೆ ಪ್ರೊತಿ
ಸಮಾಧಾನವಾಯಿತು. ತನ್ನ ವಿಧಾನ, ಇದಕ್ಕಿಂತ ನೂರುಪಟ
ಸರಳವಾಗಿದೆ ಎಂದು ಅವನಿಗೆ ಖಚಿತವಾಯಿತು.

ಇಂಗ್ಲೆಂಡಿನ ಸರ್ಕಾರಿ ವಕೀಲರ ಹತ್ತಿರ ಸ್ವಾಮ್ಯಕ್ಕಾ
ಅರ್ಜಿ ಹಾಕಿದ. ಉತ್ತರಕ್ಕಾಗಿ ಅವನು ಮೂರು ವಾರಗಳ
ಕಾಯಬೇಕಾಯಿತು.

"ನಿಮ್ಮ ಸಂಶೋಧನೆಗೆ ನಾವು ಸ್ವಾಮ್ಯ ಕೊಡಲ
ಸಾಧ್ಯವಿಲ್ಲ. ಅದನ್ನಾಗಲೇ ನಿಮ್ಮ ಪತ್ರಿಕೆ ಪ್ರಕಟಿಸಿಬಿಟ್ಟದೆ
ಎಂದಷ್ಟೇ ಹೇಳಿದ.

"ಸಾಧ್ಯವಿಲ್ಲ, ಇದೆಲ್ಲೂ ಪ್ರಕಟವಾಗಿಲ್ಲ."

ವಕೀಲ 'ಮಾರಿಸ್ ಟಿನ್' ಪತ್ರಿಕೆಯ ಹೆಸರು ಹೇ
ಅದರಲ್ಲಿ ನೋಡಿ ಎಂದಾಗ ಫಿನ್ಲೆಗೆ ಹಿಂದಿನದೆಲ್ಲ ನೆನಪಾಯಿತು
ಆದರೆ ಅದನ್ನು ಕೇಳಲು ವಕೀಲನಿಗೆ ವ್ಯವಧಾನವಿರಲಿಲ್ಲ.

ಫಿನ್ಲೆ ಬೇರೆ ದಾರಿ ಕಾಣದೆ, ಅಲ್ಲಿ ನಡೆದ ತನ್ನ ಪ್ರಯೋಗ
ವಿವರ ಬರೆದು, 'ಪತ್ರಿಕೆಯಲ್ಲಿ ಬಂದದ್ದು ಬರಿಯ ಸುದ್ದಿ, ಅದರ
ತನ್ನ ಉಪಕರಣದ ವಿವರಣೆ ಇಲ್ಲ' ಎಂದು ಒಂದು ದೀರ್ಘ
ಪತ್ರವನ್ನು ಬರೆದ. ಮತ್ತೆ ಎರಡುವಾರ ಕಳೆಯಿತು.

ಇಂಗ್ಲೆಂಡಿನ ಸರ್ಕಾರಿ ವಕೀಲರ ಕಚೇರಿಯಿಂದ ಫಿನ್
ಮೋರ್ಸ್‌ಗೆ ಕರೆಬಂದಿತು. "ನಿಮ್ಮ ಕಾಗದ ಇಡೀ ಓದಲು ನನ
ಬಿಡುವಿಲ್ಲ. ನಿಮ್ಮದೇ ಸಾಕಷ್ಟು ದೊಡ್ಡ ದೇಶ. ಅಲ್ಲಿ ಸ್ವಾಮ
ಪಡೆದುಕೊಳ್ಳಿ ಸಾಕು" ಎಂದಿಷ್ಟೇ ಹೇಳಿ ಸಂದರ್ಶನ ಮುಗಿಸಿಬಿಟ್ಟ

ಇಂಗ್ಲೆಂಡಿಗೆ ವಿದಾಯ ಹೇಳಿ, ಫಿನ್ಲೆ ಮೋರ್ಸ್ ಫ್ರಾನ್ಸಿ
ಹೊರಟ. ಅಲ್ಲಿಯ ವಕೀಲರಿಗೆ ಪತ್ರ ಬರೆದು, ಉತ್ತರಕ್ಕಾ

ಕಾದು ಕುಳಿತ. ಇಂಗ್ಲೆಂಡಿನ ಅನುಭವ, ಅವನಿಗೆ ಕಾಯುವ ಪಾಠವನ್ನು ಕಲಿಸಿತ್ತು. ಆದರೆ ಕೆಲವೇ ದಿನಗಳಲ್ಲಿ ಮೋರ್ಸ್‌ಗೆ ಕರೆ ಬಂದಿತು. "ಇನ್ನೆರಡು ವರ್ಷಗಳಲ್ಲಿ, ಇಲ್ಲಿ ನಿಮ್ಮ ಪ್ರಯೋಗದ ಸಫಲತೆಯನ್ನು ತೋರಿಸಿದರೆ, ನಿಮಗೆ ಇಲ್ಲಿಯ ಸ್ವಾಮ್ಯ ದೊರಕುವುದು ಕಷ್ಟವಿಲ್ಲ." ಅಮೆರಿಕದಲ್ಲಿ, ತನ್ನ ತಾಯ್ನಾಡಿನಲ್ಲಿ, ಆರು ವರ್ಷಗಳಿಂದ ಶ್ರಮಪಟ್ಟರೂ ಜನರು ಅವನ ವಿಧಾನವನ್ನು "ಅನುಕೂಲ" ಎಂದು ಒಪ್ಪಿಕೊಂಡಿರಲಿಲ್ಲ. ಇಲ್ಲಿ, ಕಾಣದ ನಾಡಿನಲ್ಲಿ, ಎರಡು ವರ್ಷಗಳಲ್ಲಿ ಕೆಲಸ ಮಾಡಲು ಸಾಧ್ಯವೇ?

ಮಾರನೆಯ ದಿನವೇ ಅಲ್ಲಿಯ ವಿಜ್ಞಾನಿ, ಅರಾಗೋ, ಮೋರ್ಸ್‌ನನ್ನು ಮಾತನಾಡಿಸಲು ಬಂದ, "ನಿಮ್ಮಿಂದ ನಮಗೊಂದು ಉಪಕಾರವಾಗಬೇಕು" ಎಂದು ಅರಾಗೋ ಕೇಳಿದಾಗ, ಫಿನ್ಲೆ ತಡವರಿಸಿದ. ಫ್ರಾನ್ಸಿನ ಜನರ ಉಪಕಾರಕ್ಕಾಗಿ ಅವನು ಕಾದು ಕುಳಿತಿರುವಾಗ, ಅಲ್ಲಿಯ ಜನಪ್ರಿಯ ವಿಜ್ಞಾನಿ ಹೀಗೆ ಹೇಳಬಹುದೆ?

"ಧಾರಾಳವಾಗಿ, ಏನು ಮಾಡೋಣ?"

"ನಮ್ಮ ವಿಜ್ಞಾನ ಸಂಘದಲ್ಲಿ, ನಿಮ್ಮ ಪ್ರಯೋಗದ ಪ್ರದರ್ಶನವಾಗಬೇಕು." ಅದಕ್ಕಾಗಿ ಕಾದಿದ್ದ ಫಿನ್ಲೆ ಮೋರ್ಸ್ ತಕ್ಷಣವೇ ಉಪಕರಣಗಳನ್ನು ಜೋಡಿಸಿಕೊಂಡ. ಪ್ರದರ್ಶನ ಯಶಸ್ವಿಯಾಯಿತು. ಹೊಗಳಿಕೆ ಬೇಕಾದಷ್ಟು ಸಿಕ್ಕಿತು. ಇನ್ನೂ ನಾಲ್ಕಾರು ಕಡೆ ಪ್ರದರ್ಶನಗಳು ನಡೆದವು. ಎಲ್ಲ ಕಡೆಗಳಲ್ಲೂ ಪ್ರಶಂಸೆ ದೊರಕಿತು. ಆದರೆ ಪ್ರಶಂಸೆಯಿಂದ ತಂತಿಗಳನ್ನು ಕೊಳ್ಳಲೂ ಹಾಕಲೂ ಬರುವುದಿಲ್ಲವಲ್ಲ. ಅವನ ಸಮಸ್ಯೆ ಹಾಗೇ ಉಳಿಯಿತು.

ಏನೂ ಮಾಡದಯೇ ಹತ್ತು ತಿಂಗಳು ಕಳೆದುಹೋದುವು.

ಊರಿನಿಂದ ಕಾಗದಗಳು ಬಂದುವು. "ಹಣ ಸಿಗುವುದು ಕಷ್ಟ !
ಎಂದು ಎಲ್ಲ ಕಾಗದಗಳೂ ಸಾರಿದವು. ಫಿನ್ಲೆಯ ಅಷ್ಟು ದಿನಗ
ನಿರೀಕ್ಷೆ, ನಿರಾಸೆಯ ಮುದ್ದೆಯಾಗಿ ಬಿದ್ದಿತ್ತು. ಒದ್ದು ತ
ಲಾರದಷ್ಟು ಭಾರವಾದ ಮುದ್ದೆ !

ಊರಿಗೆ ಹಿಂತಿರುಗುವ ಯೋಚನೆಯಲ್ಲಿದ್ದಾಗ ರಷ್ಯ
ಪ್ರತಿನಿಧಿಯೊಬ್ಬನ ಭೆಟ್ಟಿಯಾಯಿತು. ದುಬಾಷಿಯೊಂದಿ
ಬಂದಿದ್ದ ರಷ್ಯದ ಪ್ರತಿನಿಧಿ, ಅವನಿಗೆ ಪ್ರಶ್ನೆಗಳ ಮಳೆಯನ್ನೆ
ಕರೆದ, "ರಷ್ಯದಲ್ಲಿ ಆವನ ಪ್ರಯೋಗ ಮಾಡಲು ಸಾಧ್ಯವೇ
ಎಷ್ಟು ಕಡಿಮೆ ದಿನಗಳಲ್ಲಿ ಸಾಧ್ಯ? ನೇರವಾಗಿ ರಷ್ಯಾ
ಬರಬಹುದೇ? ಉಪಕರಣಗಳಿಗೆ ಅಮೆರಿಕಾಗೆ ಹೋಗಿ ಬರಬೇಕೆ

"ಹೌದು ಹೋಗಿ ಬರಬೇಕು."

ರಷ್ಯದವ ಪೂರ್ತಿ ಕಾರ್ಯಕ್ರಮವನ್ನೇ ಹಾಕಿಕೊಟ್ಟ
"ಈಗಲೇ ಅಮೆರಿಕಾಗೆ ಹೊರಟರೆ, ಜುಲೈನಲ್ಲಿ ನೇರವಾ
ರಷ್ಯಕ್ಕೆ ಬರಬಹುದು. ಚಳಿಗಾಲಕ್ಕೆ ಮೊದಲು ಕೆಲಸ ಆರಂಭಿ
ಬಹುದು. ನಾವೆಷ್ಟು ಜವರನ್ನು ಬೇಕಾದರೂ ಕೆಲಸಕ್ಕೆ
ಕೊಡುತ್ತೇವೆ ನಿಮಗೆ ಮೂರುಸಾವಿರ ಡಾಲರ್ ಹಣ ಕಳುಹಿ
ಸಿದರೆ ಆದೀತೆ? ಯಾವುದಕ್ಕೂ ನಾನು ಅಲ್ಲಿಯ ಅಧಿಕಾ
ಗಳೊಡನೆ ಮಾತನಾಡಿ ನಿಮಗೆ ಕಾಗದ ಹಾಕಿಸುತ್ತೇನೆ."

ಫಿನ್ಲೆ ಮೋರ್ಸ್ ತಾಯ್ನಾಡಿಗೆ ಹಿಂತಿರುಗಿದ. ಅಲ್ಲಿ, ಅವ
ಜೊತೆಯಲ್ಲಿ ಪಾಲು ತೆಗೆದುಕೊಂಡವರೆಲ್ಲ ಈಗ ಬೇರೆ ಕೆಲ
ಹುಡುಕಿಕೊಂಡು ಹೊರಟಿದ್ದರು. ತನ್ನ ಹಳೇ ಉದ್ಯೋಗವನ್ನು
ಹಣ ಸಂಪಾದನೆಗಾಗಿ, ಪುನಃ ಪ್ರಾರಂಭಿಸಿದ. ರಷ್ಯದ ಕಾಗ
ಕ್ಕಾಗಿ ಕಾಯುತ್ತಲೇ ಇದ್ದ.

೭

ಕಾಗದ ನಿಧಾನವಾಗಿ ಬಂದಿತು. "ರಷ್ಯದಲ್ಲಿ ಯಾರೂ ತಂತಿವಾಹಕಕ್ಕೆ ಉತ್ತೇಜನ ಕೊಡಲಿಲ್ಲ." ಅಷ್ಟು ದಪ್ಪ ಕಾಗದದಲ್ಲಿ ಅವನಿಗೆ ನಿರಾಸೆಯು ಭೂತದ ದರ್ಶನವಾಯಿತು. ಎರಡು ದಿನಗಳಿಂದ ಊಟವಿಲ್ಲದೇ ಇದ್ದ ಫಿನ್ಲೆ ಮೋರ್ಸ್‌ಗೆ ನೇರವಾಗಿ ಕುಳಿತುಕೊಳ್ಳಲೂ ಶಕ್ತಿ ಉಳಿಯಲಿಲ್ಲ.

ಹಾಗೂ ಹೀಗೂ ಮೂರು ವರ್ಷಗಳು ಕಳೆದವು. ಗೆಳೆಯರಿಂದ ಚಿತ್ರಗಳಿಗಾಗಿ ಮುಂಗಡ ಪಡೆದಿದ್ದ ಹಣ ಅವನಿಗೆ ಹೊರೆಯಾಗಿಯೇ ಉಳಿದಿತ್ತು. ಚಿತ್ರ ಬರೆದು ಕೊಟ್ಟು ತೀರಿಸುವ ಮನಸ್ಸು ಅವನಿಗಿರಲಿಲ್ಲ. ಚಿಂತೆಯು ಹೊರೆಹೊತ್ತು ತನ್ನ ಕೋಣೆಗೆ ಹಿಂದಿರುಗುತ್ತಿದ್ದ ಫಿನ್ಲೆಗೆ ಯಾರೋ ಮಾತನಾಡಿಕೊಳ್ಳುತ್ತಿದ್ದುದು ಕೇಳಿಸಿತು.

"ಇಲ್ಲ, ಇಲ್ಲ, ಪಕ್ಕದ ಕೋಣೆಯಾತ ಒಬ್ಬ ಕಲಾವಿದ. ಅವನಿಂದ ನಿಮಗೇನೂ ತೊಂದರೆಯಾಗದು. ಒಂದಾನೊಂದು ಕಾಲದಲ್ಲಿ ಬಹಳ ಖ್ಯಾತಿ ಇತ್ತು. ಈಗ ಯಾವುದೋ ಕೆಲಸಕ್ಕೆ ಬಾರದ ಸಂಶೋಧನೆಯಲ್ಲಿ ತಲ್ಲೀನನಾಗಿದ್ದಾನೆ. ಅವನ ಕೋಣೆಯು ತುಂಬ ಬರಿಯ ತಂತಿಗಳೇ."

ಕೋಣೆಯ ಬಾಗಿಲು ತೆಗೆದು ಬಂದವನಿಗೆ ಕಂಡಿದ್ದೂ ಅದೆ. ಬರಿಯ ತಂತಿಗಳು. ಆದರೆ ಎಲ್ಲದರ ಮೇಲೂ ಬರಿಯ ಧೂಳೇ. ಅವನ ಮನಸ್ಸಿಗೆ ಚಿಂತೆ ಕವಿದುಕೊಂಡಹಾಗೆ, ಅವನ ಕುಂಚ, ಚಿತ್ರ, ತಂತಿ, ಕೋಶ ಎಲ್ಲದರ ಮೇಲೂ ಧೂಳು.

ಎಲ್ಲ ಧೂಳನ್ನೂ ಕೊಡವಿ, ಸ್ವಚ್ಛಮಾಡಿಕೊಳ್ಳಬೇಕು ಎಂದುಕೊಂಡ. ನೀರಿನಡಿಯಲ್ಲಿ ತಂತಿ ಹಾಕಿ, ಒಂದು ಪ್ರದರ್ಶನ ಇಟ್ಟರೆ ಆಗ ಜನ ನಂಬಬಹುದು. ಆಗ ಅವನಿಗೆ ಬೇಕಾದ

ಉತ್ತೇಜನ ದೊರಕಬಹುದು. ಆದರೆ ಅದಕ್ಕೆ ಅವಾಹಕ ಕವ
ವಿರುವ ತಂತಿ ಬೇಕಾಗಿತ್ತು. ಪುನಃ ಹಣದ ಪ್ರಶ್ನೆ ಭೂತಾಕ
ವಾಗಿ ನಿಂತಿತು. ಹೆಚ್ಚು ಹುಡುಗರಿಗೆ ಪಾಠ ಹೇಳಿ, ಹೆಚ್ಚು ಹ
ಸಂಪಾದಿಸಬೇಕೆಂದು ಮನಸ್ಸು ಮಾಡಿದ.

ಅವನಿಗೆ ಬೇಕಾದ ಉಪಕರಣಗಳೆಲ್ಲ ಸಿದ್ಧವಾಗಲು ಒಂದ
ವರ್ಷವೇ ಬೇಕಾಯಿತು. ಪ್ರದರ್ಶನದ ಹಿಂದಿನ ದಿನ ಒಂದ
ದೋಣಿ ಬಾಡಿಗೆಗೆ ತೆಗೆದುಕೊಂಡು, ಸರೋವರದಲ್ಲಿ ಒಂದ
ದಡದಿಂದ ಇನ್ನೊಂದು ದಡಕ್ಕೆ ತಂತಿಯನ್ನು ಹಾಕಿದ. ಆ
ದಡದಲ್ಲಿ ಕೋಶ ಮತ್ತು ಪ್ರದರ್ಶನಕ್ಕೆ ಬೇಕಾದ ಎಲ್ಲ ವ್ಯವ
ಯನ್ನೂ ಮಾಡಿದ. ಅಲ್ಲಿ ಗೆಳೆಯ ಪ್ರೊ. ಗಾಲೆ, ಇಲ್ಲಿ ಫಿ
ಮೋರ್ಸ್ ಕುಳಿತಿರಬೇಕು ಎಂದು ಗೊತ್ತುಪಡಿಸಿಕೊಂಡರು.

ಪ್ರದರ್ಶನದ ಬಗ್ಗೆ ಪತ್ರಿಕೆಯಲ್ಲಿ ಜಾಹಿರಾತು ಬಂದಿತ
ಜನ ಬಂದು ಸೇರಿದರು. ಮಧ್ಯಾಹ್ನ ಪ್ರಯೋಗ ಇದ್ದರ
ಬೆಳಗಿನಿಂದಲೇ ಜನ ಸೇರಲು ಆರಂಭಿಸಿದರು. ಊಟ ನಿದ್ರೆ
ಗಳಿಲ್ಲದೆ ಫಿನ್ಲೆ ಬಹಳ ಸೋತುಹೋಗಿದ್ದ.

"ನೀನು, ಈ ಸಂದೇಶವಾಹಕದ ಸಂಶೋಧನೆಗಾಗಿ ಬಹ
ತ್ಯಾಗಮಾಡಿದ್ದೀಯ. ಆದರೆ ಎಲ್ಲ ಹಿಂದಕ್ಕೆ ಬರುತ್ತದೆ. ಒಂದ
ದಿನ ನಿನ್ನ ಈ ವಿಶಾಲವಾದ ಭುಜದ ತುಂಬ ಬರಿಯ ಪದಕಗಳ
ತುಂಬಿರುತ್ತವೆ" ಎಂದು ಅವನ ಹಳೆಯ ಗೆಳೆಯ ಹಾರೈಸಿದ.

'ಟರ್ರ್' ಪ್ರೊ. ಗಾಲೆ 'ಎಲ್ಲ ತಯಾರು' ಎನ್ನುವುದಕ
ಸಂದೇಶ ಕಳಿಸಿದರು. ನೆರೆದಿದ್ದ ಜನರೆಲ್ಲ ಮಾತು ನಿಲ್ಲಿಸಿದರು
ಅಲ್ಲಿ ನೆರೆದಿದ್ದವರೆಲ್ಲರಿಗೂ ಕುಣಿಯುವ ಉಪಕರಣವನ್ನು ಕಾಣು
ಆಸೆ. "ಚಿಂತಿಸಬೇಡಿ ನಿಮಗೆ ತೃಪ್ತಿಯಾಗುವವರೆಗೆ ಪ್ರದರ್ಶ
ಮುಂದುವರಿಯುತ್ತದೆ" ಎಂದು ಫಿನ್ಲೆ ಆಶ್ವಾಸನೆ ಕೊಟ್ಟಮೇ
ಜನರು ನಿಂತಲ್ಲೇ ನಿಂತು ಅವಲೋಕಿಸಲು ಆರಂಭಿಸಿದರು.

ಒಂದೊಂದೇ ಅಕ್ಷರಗಳನ್ನು ಸಂಕೇತಗಳಲ್ಲಿ ತಂತಿಯ ಮೂಲಕ ಕಳುಹಿಸಿದ. ಅದೇ ಸಂಕೇತಗಳು ಅಲ್ಲಿಂದ, ಉತ್ತರ ರೂಪದಲ್ಲಿ ಬಂದವು. ಆನಂದ, ಉತ್ಸಾಹಗಳಿಂದ ಫಿನ್ಲೆ ಸರಸರನೆ ತನ್ನ ಸಂದೇಶ ಕಳುಹಿಸಿದ.

ಅಲ್ಲಿಂದ ಉತ್ತರ ಬರಲೇ ಇಲ್ಲ! ಅದಕ್ಕಾಗಿ ಕಾದು ಕುಳಿತ. ಇಲ್ಲ! ಯಾವ ಉತ್ತರವೂ ಇಲ್ಲ!

"ಏ . . ಏನಾಯ್ತು? ಯಾ . . . ಯಾಕೆ . . ." ತೊದಲಿದ ಫಿನ್ಲೆ. ಜನ "ಗುಜು ಗುಜು" ಎಂದು ಆರಂಭಿಸಿದರು.

ಕ್ರಮೇಣ ಗುಂಪು ಗಲಾಟೆ ಮಾಡಿತು. ಫಿನ್ಲೆ ಗುಂಪಿಗೆ ವಿವರಿಸುವ ವಿಫಲಯತ್ನಮಾಡಿದ.

"ಸ್ವಲ್ಪ ತಾಳ್ಮೆಯಿಂದ ಇರಿ. ಒಂದು ಸುತ್ತು ಹೋಗಿ ಏನಾಗಿದೆ ಎಂದು ನೋಡಿಬರಲು ಸಮಯಕೊಡಿ. ವ್ಯವಸ್ಥೆಯಲ್ಲಿ ಏನೂ ತಪ್ಪಿಲ್ಲ. ಮಧ್ಯೆ ಏನಾದರೂ ತಂತಿ ಕಳಚಿಕೊಂಡಿರಬೇಕು. ಸ್ವಲ್ಪ ನಿಧಾನಿಸಿ" ಧ್ವನಿ ಎತ್ತರಿಸಿ, ಬೇಡಿಕೊಂಡ. ಇಲ್ಲ ಯಾರೂ ಕೇಳಿಸಿಕೊಳ್ಳಲಿಲ್ಲ. "ಇದೊಂದು ಹುಚ್ಚು" ಎಂದುಕೊಂಡು ಎಲ್ಲರೂ ಚದರಿಬಿಟ್ಟರು.

ಎರಡು ದಿನಗಳಾದ ಮೇಲೆ ಅವನಿಗೆ ಕಾರಣ ತಿಳಿಯಿತು. ಸರೋವರದಲ್ಲಿ ದೋಣಿಯಲ್ಲಿ ಹೋಗುತ್ತಿದ್ದ, ಅಂಬಿಗನಿಗೆ ಹುಟ್ಟಿಗೆ ಏನೋ ತಗುಲಿದಂತಾಯಿತು. ಏನೆಂದು ಎಳೆದು ನೋಡಿ ದರೆ ದಪ್ಪತಂತಿ! ಎಳೆದ. ಎಳೆದಷ್ಟು ಬಂದಿತು. 'ಛೀ' ಎಂದವನೆ ಮಧ್ಯೆ ತುಂಡು ಮಾಡಿ ಬಿಟ್ಟ! ತನ್ನ ಪಾಡಿಗೆ ಆ ಕಡೆಗೆ ಹೋಗಿ ಬಿಟ್ಟ. ಇವರ ಪ್ರಯೋಗದ ವಿಷಯವೇ ತಿಳಿಯದ ಮುಗ್ಧ ಅಂಬಿಗ ಅವನು!

ಫಿನ್ಲೆ ಈ ವಿವರವನ್ನು ಪತ್ರಿಕೆಗಳಲ್ಲಿ ಹಾಕಿಸಿದ ಆದ
ಆದರಿಂದ ಅವನಿಗೇನೂ ಲಾಭವಾಗಲಿಲ್ಲ. ಅವನು ಪ್ರಯತ್ನದಲ್ಲಿ
ಸೋತಿದ್ದು ನಿಜ. ಬಾಕಿ ವಿಷಯ ಜನರಿಗೆ ಬೇಡವಾಯಿತು.

ಅವನು ಪುನಃ ಶಾಸಕರ ಮೊರೆ ಹೊಕ್ಕ. ಅವನಿ
ಇದೊಂದೇ ದಾರಿ ಎನ್ನಿಸಿತು—ತನ್ನ ವ್ಯವಸ್ಥೆಯಲ್ಲಿ ನಂಬಿ
ಮೂಡಿಸಿ ಸರ್ಕಾರದಿಂದ ಹಣ ಮಂಜೂರು ಮಾಡಿಸಿಕೊಂಡು—
ಉಳಿದ ಕೆಲಸ ಮಾಡಬೇಕು – ಇದೊಂದು ಕೊನೆಯ ಪ್ರಯತ್ನ

"ನಿಮ್ಮ ಪ್ರಯೋಗ ತೋರಿಸಿ. ಮಸೂದೆಯಲ್ಲಿ ನಿಮ್ಮ
ವ್ಯವಸ್ಥೆಯನ್ನೂ ಸೇರಿಸಿಕೊಂಡಿದ್ದೇವೆ." ಎಂದು ಶಾಸಕರು ಬಂದ
ಕೇಳಲಾರಂಭಿಸಿದರು. ಅವನಿಗೀಗ ಸೋಲು ಅಭ್ಯಾಸವಾಗಿತ್ತು
ಆದರೂ ಗೆಲ್ಲಬೇಕೆಂಬ ಹಠವಿತ್ತು—ಆಸೆಯಿತ್ತು. "ಗೆಲುವನ್ನೆದು
ರಿಸುವುದಕ್ಕಿಂತ, ಸೋಲನ್ನು ಎದುರಿಸುವುದಕ್ಕೆ ಹೆಚ್ಚು ಕೆಚ್ಚು
ಬೇಕು"—ಅದಕ್ಕಾಗಿ ತನ್ನ ಮಾನಸಿಕ ಶಕ್ತಿಯನ್ನೆಲ್ಲಾ ಕೂಡಿಸಿ
ಕೊಂಡು ಸೋಲಿಗಾಗಿಯೇ ಕಾದು ಕುಳಿತ.

ಪ್ರೇಕ್ಷಕರ ಸ್ಥಾನದಲ್ಲಿ ಫಿನ್ಲೆ ಮೋರ್ಸ್ ಕುಳಿತಿದ್ದಾನೆ.
ಅವನ ಮಸೂದೆ ಸಭೆಯ ಮುಂದೆ ಬಂದಿತು.

"30 ಸಾವಿರ ಡಾಲರನ್ನು ವಿದ್ಯುತ್ ಕಾಂತೀಯ ಸಂದೇಶ
ವಾಹಕವನ್ನು ಪರೀಕ್ಷಾರ್ಥವಾಗಿ ಸ್ಥಾಪಿಸಲು ಮಂಜೂರು ಮಾಡ
ಬೇಕು" ಚರ್ಚೆಯಾದ ಮೇಲೆ ಮತಕ್ಕೆ ಹಾಕಿದರು. ಫಿನ್ಲೆ
ಉಸಿರು ಬಿಗಿ ಹಿಡಿದು ಕಾದು ಕುಳಿತಿದ್ದ.

"ಓಟು ಮಾಡಿದವರು ಒಟ್ಟು 174 ಮಂದಿ. ಮಸೂದೆಗೆ
ವಿರುದ್ಧವಾಗಿ 85. ಪರವಾಗಿ 89. ಮಸೂದೆ ಅಂಗೀಕಾರ
ವಾಯಿತು," ಎಂದು ಕೂಗಿದರು. ಇನ್ನು ಸೆನೇಟಿನಲ್ಲಿ ದಾಟಿ
ಬಿಟ್ಟರೆ ಅವನ ಕೆಲಸ ಮುಗಿಯಿತು!

ಕೆಲಸವಾಗಿದ್ದಕ್ಕಾಗಿ, ತನ್ನ ಶಾಸಕ ಗೆಳೆಯರನ್ನು ವಂದಿಸಿದ. "ಇಲ್ಲಿ ಏನೋ ನಮ್ಮ ಕೈಲಾಗಿದ್ದನ್ನು ಮಾಡಿದೆವು. ಆದರೆ ಸೆನೇಟಿನಲ್ಲಿ ಈ ಅಧಿವೇಶನಕ್ಕೆ ನಿಮ್ಮ ಮಸೂದೆ ಬರುವ ನಂಬಿಕೆ ಇಲ್ಲ."

"ಅಂದರೆ . . . ?"

"ಅಂದರೆ ಅಧಿವೇಶನ ಮುಗಿಯುತ್ತಾ ಇದೆ. ನೂರಾರು ಮಸೂದೆಗಳಿವೆ. ನಿಮ್ಮ ಮಸೂದೆಯುವರೆಗೆ ಅಧಿವೇಶನ ಇರುತ್ತದೋ, ಮುಗಿಯುತ್ತದೋ—ಗೊತ್ತಿಲ್ಲ."

ಗೆಳೆಯರ ಎಚ್ಚರಿಕೆ ಇದ್ದರೂ, ತನ್ನ ವಿಷಯ ಈ ಬಾರಿ ಬರಲಾರದು ಎಂಬ ಸಂಶಯ ಮನಸ್ಸಿನಲ್ಲಿದ್ದರೂ, ಅಧಿವೇಶನ ನಡೆಯುವಾಗ, ಯಾವುದೋ ಒಂದೆಳೆ ಆಸೆಯನ್ನು ನಂಬಿಕೊಂಡು ಪ್ರೇಕ್ಷಕರ ಗ್ಯಾಲರಿಯಲ್ಲಿ ದಿನವೂ ಹೋಗಿ ಕುಳಿತಿರುತ್ತಿದ್ದ.

"ಮೋರ್ಸ್, ಹೀಗೆ ಕುಳಿತು ಏನೂ ಉಪಯೋಗವಿಲ್ಲ. ನಿಮ್ಮ ಮಸೂದೆಗೂ ಮೊದಲು ಮುನ್ನೂರು ಮಸೂದೆಗಳಿವೆ. ಇನ್ನು ಮೂರು ದಿನಕ್ಕೆ ಅಧಿವೇಶನ ಮುಗಿಯಬೇಕು. ನಿಮ್ಮದು ಬಹುಶಃ ಮುಂದಿನ ಅಧಿವೇಶನಕ್ಕೆ . . . . " ಎಂದು ಅವನ ಗೆಳೆಯ ಎಲ್ಸ್‌ವರ್ತ್ ಹೇಳಿದಾಗ ಮೋರ್ಸ್‌ನ ಆ ಒಂದೆಳೆಯೂ ಕಡಿದುಹೋಯಿತು. ಕೈಯಲ್ಲಿ ಸ್ವಲ್ಪ ಹಣವಿರುವಾಗಲೇ ಊರಿಗೆ ಹಿಂತಿರುಗುವುದು ಉತ್ತಮ ಎನಿಸಿತು. ಇನ್ನು ಈ ಸಂದೇಶ ವಾಹಕದ ವಿಷಯವನ್ನೇ ಮರೆಯಲು ನಿರ್ಧರಿಸಿದ.

ಆದರೆ ಅವನು ಮರೆತದ್ದು ತನ್ನ ಹೊಸ ನಿರ್ಧಾರವನ್ನು. ಅಧಿವೇಶನದ ಕೊನೆಯ ದಿನ ಫಿನ್ಲೆ ಮೋರ್ಸ್ ಪ್ರೇಕ್ಷಕರ ಮಧ್ಯದಲ್ಲಿ ಕುಳಿತಿದ್ದ. ಈ ಬಾರಿ ಗೆಳೆಯನ ಜೊತೆಯಲ್ಲಿ ಅವನ ಮಗಳು ಆ್ಯನಿ ಎಲ್ಸ್‌ವರ್ತ್ ಕೂಡ ಬಂದಳು. "ಏನೂ ಭರವಸೆ

ಇಲ್ಲ. ಈ ರಾತ್ರಿ ಸಭೆ ಮುಕ್ತಾಯವಾಗುತ್ತದೆ.” ತಂದೆಯ
ಜೊತೆಯಲ್ಲಿ ಬಂದ ಪುಟ್ಟ ಹುಡುಗಿ ಮೋರ್ಸ್‌ನನ್ನೂ ತಂದೆಯನ್ನೂ
ನೋಡುತ್ತಾ ನಿಂತಳು. ಬಹುಶಃ ಅವಳಿಗೆ ತಂದೆ ಎಲ್ಲ ವಿಷಯ
ವನ್ನೂ ಹೇಳಿದ್ದರೆಂದು ಕಾಣುತ್ತದೆ.

“ಸರಿ . . . ಸರಿ . . . ನಾನು ಕಾಯುವುದಿಲ್ಲ ಹೋಗು
ತ್ತೇನೆ”—ಎಂದು ತಡವರಿಸುತ್ತಾ ಎದ್ದು ಹೊರಟ ಫಿನ್ಲೆ ಮೋರ್ಸ್
ಹೇಗೋ ಹೊಟೆಲಿನ ತನ್ನ ಕೋಣೆಯಲ್ಲಿ ಕುಳಿತಿದ್ದ. ಹೇಗೆ
ಬಂದನೋ, ಯಾವಾಗ ಬಂದನೋ, ಅವನಿಗೇ ತಿಳಿಯದು.
ಯಾವಾಗಲೋ ನಿದ್ರೆಯ ಮಂಪರು ಕವಿದಿತ್ತು. ಬಿಸಿಲು
ಮುಖದ ಮೇಲೆ ಬಿದ್ದಾಗಲೇ ಅವನಿಗೆ ಎಚ್ಚರವಾದದ್ದು.
ಮಾಲೀಕನಿಗೆ ತಾನು ಹೊರಡುವುದಾಗಿ ಹೇಳಿ ತನ್ನ ಲೆಕ್ಕವನ್ನು
ಕೊಡಬೇಕೆಂದು ಹೇಳಿದ. ಬೆಳಗ್ಗೆಗೆ ಬರಿಯ ಕಾಫಿ ಸಾಕೆಂದ
ಅದು ಬಿಟ್ಟರೆ, ಉಳಿದ ಹಣ ಅವನಿಗೆ ಊರಿಗೆ ಹೋಗಲು
ಸಾಕಾಗುವಷ್ಟಿತ್ತು.

ಅಂದು ಹಡಗಿನಲ್ಲಿ, ಈ ಯೋಜನೆ ರೂಪುಗೊಂಡಾಗ
ಅದು ಇಷ್ಟು ತನ್ನನ್ನು ಕಾಡಿಸಬಹುದು ಎಂದು ಅವನು ಎಣಿಸಿ
ಲಿಲ್ಲ. ಹನ್ನೊಂದು ವರ್ಷಗಳಿಂದ ಅದು, ಅವನಿಗೆ ಬರಿಯ ಶ್ರಮ
ವನ್ನೇ ಕೊಟ್ಟಿತ್ತು. ಇನ್ನು ಯಾವ ಭರವಸೆಯೂ ಇಲ್ಲ. ಅದನ್ನು
ಮರೆಯಲೇಬೇಕು. ಹಿಡಿದ ಕೆಲಸವನ್ನು ಸಾಧಿಸುವ ಆಸೆ ಇದ್ದರೂ
ಅವನಲ್ಲಿ ಯಾವ ಶಕ್ತಿಯೂ ಉಳಿದಿರಲಿಲ್ಲ. ಸಂಪೂರ್ಣವಾಗಿ
ಸೋತು ಹೋಗಿದ್ದ ಫಿನ್ಲೆ ಮೋರ್ಸ್ ಈಗ ತನ್ನ ಕಲೆಯ ಬಗ್ಗೆ
ಯೋಚಿಸಲಾರಂಭಿಸಿದ. ಇಷ್ಟು ಕಾಲ, ಶಕ್ತಿಯನ್ನು ಅದಕ್ಕೆ
ವಿನಿಯೋಗಿಸಿದ್ದರೆ, ಎಷ್ಟು ಬಗೆಬಗೆಯ ಚಿತ್ರಗಳನ್ನು,
ಎಷ್ಟೊಂದು ಚಿತ್ರಗಳನ್ನು ಬರೆಯಬಹುದಾಗಿತ್ತು. ಇನ್ನು ಅವನಿ

ಚಿಂತಿಸುವ ಶಕ್ತಿಯೂ ಇಲ್ಲವಾಯಿತು. ತನ್ನ ಚಿಕ್ಕ ಚೀಲವನ್ನು ತೆಗೆದುಕೊಂಡು ಕೆಳಗಿಳಿದ. ಇನ್ನು ಇಲ್ಲಿ ಅವನಿಗೆ ಏನೂ ಉಳಿದಿಲ್ಲ ಎನಿಸಿತು. ಭಾರವಾದ ಮನಸ್ಸಿನಿಂದ, ಇಡಲಾರದ ಹೆಜ್ಜೆಗಳನ್ನು ಇಡುತ್ತಾ ಕೆಳಗೆ ಬಂದ.

"ಪ್ರೊ। ಮೋರ್ಸ್. ನಿಮಗಾಗಿ ಒಂದು ಪುಟ್ಟ ಹುಡುಗಿ ಬಹಳ ಹೊತ್ತಿನಿಂದ ಕಾಯುತ್ತಿದ್ದಾಳೆ."

ಅವನು ತಲೆ ಎತ್ತದೆ ಹೊರಕ್ಕೆ ಹೊರಟ. "ಅವಳು ಎಬ್ಬಿಸ ಬೇಡ ಎಂದಳು. ಇಲ್ಲದಿದ್ದರೆ ಆಗಲೇ ಕರೆಯುತ್ತಿದ್ದೆ" ಅವನು ಸಿಟ್ಟಾದನೆಂದು ಭಾವಿಸಿ, ಮಾಲೀಕ ಅವನ ಹಿಂದೆಯೇ ಹೇಳುತ್ತ ಹೋದ.

"ಅಭಿನಂದನೆಗಳು—ನಾನೇ ಮೊದಲು ಅಲ್ಲವಾ ಬಂದು ಹೇಳಿದ್ದು?"

"ಹಾ . . . ಹೌದು ನೀನೇ ಮೊದಲು—ಆದರೆ ಯಾಕೆ . . . ಯಾಕೆ ಲ್ಯಾನಿ ನನಗೆ ಅಭಿನಂದನೆಗಳು . . . ?"

"ನಿಮ್ಮ ಮಸೂದೆ ಅಂಗೀಕಾರವಾಗಿದ್ದಕ್ಕೆ."

"ಸಾಧ್ಯವಿಲ್ಲ. ನಾನು ರಾತ್ರಿ 11–30ರ ವರೆಗೂ ಅಲ್ಲಿಯೇ ಇದ್ದೆ. 12.00 ಗಂಟೆಗೆ ಸಭೆ ಮುಕ್ತಾಯವಾಗಬೇಕಿತ್ತು."

"ಆದರೆ ಕೊನೇ ಘಳಿಗೆಯಲ್ಲಿ ಅದು ಅಂಗೀಕಾರವಾಯಿತು. ಅಪ್ಪ ಅಲ್ಲೇ ಇದ್ದರು. ಅವರೇ ನನ್ನನ್ನು ಇಲ್ಲಿಗೆ ಕಳಿಸಿದರು."

"ಲ್ಯಾನಿ—ವಾಷಿಂಗ್ಟನ್ ಇಂದ ಬಾಲ್ಟಿಮೋರ್‌ಗೆ ತಂತಿ ಹಾಕಿದಾಗ ನಿನ್ನದೇ—ನಿನ್ನದೇ ಮಗು—ಮೊದಲ ಸಂದೇಶ."

"ಓ—ಎಷ್ಟು ಒಳ್ಳೆಯವರು ನೀವು. ನಾನೀಗಲೇ ಹೋಗಿ ಒಂದು ಸಂದೇಶ ಹುಡುಕಿಟ್ಟುಕೊಳ್ಳುತ್ತೇನೆ."

ಫಿನ್ಲೆ ಮೋರ್ಸ್‌ನ ಮನಸ್ಸು ಹೂವಿನಷ್ಟು ಹಗುರ

ವಾಗಿತ್ತು. ಬೆಳಗಿನ ಜಾವದ ಮಲ್ಲಿಗೆಯಂತೆ ಅರಳಿ ನಗುತ್ತಿತ್ತು. ಅದು ಮುಂದಿನ ಕೆಲಸ ಕಾರ್ಯಗಳನ್ನು ಕುರಿತು ಚಿಂತಿಸಲು ತೊಡಗಿತ್ತು.

"ನಿಮಗೆ ಸುಸ್ತಾಗಿರಬೇಕು. ಸ್ವಲ್ಪ ವಿಶ್ರಾಂತಿ ತೆಗೆದು ಕೊಂಡು ಅನಂತರ ಎಲ್ಲ ಯೋಚಿಸಬಹುದು."

"ಸುಸ್ತು! ನನ್ನ ಜನ್ಮದಲ್ಲೇ ಇಷ್ಟು ಆರೋಗ್ಯವಾಗಿ ಇರಲಿಲ್ಲ. ಈ ದಿನ ಎಷ್ಟು ಸುಖವಾಗಿದ್ದೇನೆ ಗೊತ್ತಾ?"

ರಾತ್ರಿ ನಿದ್ರೆ ಮಾಡಿಲ್ಲ—ಊಟ ಮಾಡಿ ಮೂರು ದಿನ ಗಳಾದುವು—ಯಾವುದೂ ಅವನಿಗೆ ನೆನಪಿಗೆ ಬರಲಿಲ್ಲ. ಬೇಗ ಕೆಲಸ ಆರಂಭಿಸಬೇಕು. ಚುರುಕಾಗಿ ಕೆಲಸಮಾಡಬೇಕು. ಭೂಮಿ ಅಗೆಯಲು ಎಜ್ರ ಕಾರ್ನೆಲ್‌ಗೆ ಹೇಳಬೇಕು. ಅವನೇ ಸರಿಯಾದ ಶಿಷ್ಯ. ಪ್ರೊ॥ ಗಾಲೆ, ಆಲ್ಫ್ರೆಡ್ ಎಲ್ಲರಿಗೂ ಹೇಳಬೇಕು. ಅವನ ಮನಸ್ಸು ಪೂರ್ತಿ ಕಾರ್ಯಕ್ರಮಗಳನ್ನು ಒಂದು ರೂಪಕ್ಕೆ ತಂದಿತು. ಯಾಂತ್ರಿಕವಾಗಿ ತಿಂಡಿ, ಕಾಫಿ ಮುಗಿಯುತ್ತಿತ್ತು. ಆ್ಯನಿ ಎಲ್ಸ್‌ವರ್ತ್ ಅವನ ಕಣ್ಣಿನ ಹೊಳಪನ್ನೇ ನೋಡುತ್ತಾ ತನ್ನ ತಿಂಡಿಯನ್ನು ಮುಗಿಸಿದಳು.

೮

ಕೆಲಸ ಆರಂಭಿಸಿ ಎರಡು ತಿಂಗಳಾಯಿತು. ಊಟ ನಿದ್ರೆ ಯಾವುದನ್ನು ಕಾಲಕ್ಕೆ ಸರಿಯಾಗಿ ಮಾಡದೆ, ಎಷ್ಟೋ ವೇಳೆ ಅವುಗಳನ್ನು ತಪ್ಪಿಸಿಕೊಂಡು ಕೆಲಸ ಮಾಡುತ್ತಿದ್ದ. ಅಂದು ಅವನಿಗೆ ತಿನ್ನಲು, ಮಲಗಲು, ಹಣವೂ ಇರಲಿಲ್ಲ. ಮನಸ್ಸಿಗೆ ಶಾಂತಿಯೂ ಇರಲಿಲ್ಲ. ಇಂದು ಅವನಿಗೆ ಯಾವುದಕ್ಕೂ ಸಮಯ ವಿರಲಿಲ್ಲ.

ಲೈನಿ ಎಲ್ಸ್‌ವರ್ತ್ ಒಂದು ಸಂದೇಶವನ್ನು ಹಿಡಿದುಕೊಂಡೇ ಬಂದಳು. "ನೀನು ನನಗಿಂತ ಬಹಳ ಮುಂದೆ ಇದ್ದೀಯಾ— ನಾನು ನಿನಗಾಗಿ ಒಂದು ಪದ್ಯ ಬರೆದಿದ್ದೇನೆ ನೋಡು." "ನೀವು ಕವಿಗಳು ಎಂದು ನನಗೆ ತಿಳಿದಿರಲಿಲ್ಲ" ಆಶ್ಚರ್ಯಪಟ್ಟಳು ಲೈನಿ. "ಎಲ್ಲಿ ಓದಿ ಕೇಳುತ್ತೇನೆ."

"ಅದರ ಸಾರಾಂಶ ಹೇಳುತ್ತೇನೆ—ಕೇಳು"

"ನೆರಳು ಗಡಿಯಾರ ಹೇಳಿತಂತೆ—'ನಾನು ಪ್ರಕಾಶವಿರುವಾಗ ಮಾತ್ರ ಕಾಲವನ್ನು ಗುರುತಿಸುತ್ತೇನೆ'—ಎಂದು. ನಾನೂ ಹಾಗೆ ಒಳ್ಳೆಯ ಕಾಲವನ್ನು ಮಾತ್ರ ನೆನಪಿಟ್ಟುಕೊಳ್ಳುತ್ತೇನೆ. ದುರದೃಷ್ಟದ ದಿನಗಳನ್ನು ಗುರುತಿಟ್ಟುಕೊಳ್ಳುವುದೇ ಇಲ್ಲ."

"ಎಷ್ಟು ಚನ್ನಾಗಿದೆ! ಕೊಡಿ ಅದನ್ನು ಬಹಳ ಜೋಪಾನವಾಗಿಟ್ಟುಕೊಂಡಿರುತ್ತೇನೆ—ಅದನ್ನು ಮರೆಯುವುದೇ ಇಲ್ಲ— 'ಪ್ರಕಾಶವಾಗಿರುವಾಗ ಮಾತ್ರ ಕಾಲವನ್ನು ಗುರುತಿಟ್ಟುಕೊಳ್ಳುತ್ತೇನೆ.' ಎಂತಹ ಅದ್ಭುತ!" ಇದೇ ಉತ್ಸಾಹದಲ್ಲಿ ಎರಡು ತಿಂಗಳು ಕಳೆಯಿತು.

ಎಜ್ರ ಕಾರ್ನೆಲ್ ತನ್ನ ನೇಗಿಲನ್ನು ಉಪಯೋಗಿಸಿಕೊಂಡು ಉದ್ದಕ್ಕೂ ತಂತಿಯನ್ನು ಹಾಕುತ್ತಿದ್ದ. ಆ ಮುಗ್ಧನ ಉತ್ಸಾಹ, ಮೋರ್ಸ್‌ಗೆ ನಾಲ್ಕು ಕೈ ಮೂಡಿಸಿತ್ತು.

ಅವನು ಹಾಕಿರುವಷ್ಟು ತಂತಿಯನ್ನು ಪರೀಕ್ಷಿಸಿದಾಗ ಅದು 'ಅಪಸ್ವರ' ಎತ್ತಿತು! ಎಲ್ಲಿ ಏನಾಗಿರಬಹುದು ಎಂದು ತಿಳಿಯಲು ಬಹಳ ಕಷ್ಟಪಟ್ಟ. ಇದು ಗುಟ್ಟಾಗಿಯೇ ಇರಬೇಕು. ಕೆಲಸಗಾರರಿಗೇ ಆಗಲೀ, ಸರಕಾರದವರಿಗೇ ಆಗಲೀ ಈ ಸೋಲಿನ ಸುಳಿವೂ ಸಿಗಬಾರದು. ಆದರೆ ತಪ್ಪಿಗೆ ಕಾರಣವನ್ನು ಯಾರಿಗೂ ತಿಳಿಯದೇ ಕಂಡು ಹಿಡಿಯುವುದು ಹೇಗೆ?

ಈಗಾಗಲೇ ಮುಕ್ಕಾಲು ಭಾಗ ಹಣ ಖರ್ಚಾಗಿದೆ. ಅವರು ಕೊಟ್ಟಿದ್ದ ಕಾಲಾವಕಾಶದ ಬಹುಪಾಲು ಕಳೆದುಹೋಗಿದೆ— ಹೇಗೆ? ಯಾವುದರಲ್ಲಿ ತಪ್ಪಿರಬಹುದು? ಯೋಚನೆಯಲ್ಲೇ ರಾತ್ರಿ ಇಡೀ ಕಳೆಯಿತು. ಬೆಳಗ್ಗೆ ಎದ್ದು ಯಾರಿಗೂ ತಿಳಿಯದ ಹಾಗೆ ಪರೀಕ್ಷಿಸುವುದು ಹೇಗೆ?

ಸೂರ್ಯ ಮೂಡುತ್ತಿರುವ ಹಾಗೆಯೇ ಎಜ್ರ ಕಾರ್ನ್‌ಲ್ ಓಡೋಡಿ ಬಂದ "ನನ್ನ ನೇಗಿಲಿನ ತುದಿ ಬಗ್ಗಿ ಹೋಗಿದೆ. ಇನ್ನೆರಡು ದಿನ ನನಗೆ ಅವಕಾಶ ಕೊಡಿ. ಸರಿಮಾಡಿಸಿಕೊಂಡು ಕೆಲಸ ಮುಂದುವರೆಸುತ್ತೇನೆ—ನಿಮಗೆ ಅನಾನುಕೂಲವಾದದ್ದಕ್ಕೆ ಕ್ಷಮಿಸಿ . . . " ಎಂದು ಅವನು ಒಂದೇ ಉಸಿರಿನಲ್ಲಿ ಬಡಬಡಿಸಿದ. ಅವನಿಗೆ ಚಿಂತೆಯಾಗಿತ್ತು. ಫಿನ್ಲೆ ಮೋರ್ಸ್‌ಗೆ, ತನ್ನ ಗೆಳೆಯನನ್ನು ಸನ್ಮಾನಿಸುವ ವಿಧಾನವೇ ತಿಳಿಯದೇ ಹೋಯಿತು. ಏನೂ ತೋರ್ಪಡಿಸಿಕೊಳ್ಳದೆ, ಇಬ್ಬರೂ ಸ್ಥಳಕ್ಕೆ ಹೋದರು. ಭೂಮಿಯಲ್ಲಿ ಹಾಸಿಕೊಂಡಿದ್ದ ಕೇಬಲ್‌ನ್ನು ನೋಡಿದರು. ಅಲ್ಲಲ್ಲೆ ಅದರ ಕವಚ ಹರಿದಿತ್ತು! ಒಳಗಿನ ತಂತಿ ಕಾಣುತ್ತಿತ್ತು. ಅಂದರೆ ಇಂತಹ ಕೇಬಲ್ ಮೂಲಕ ವಿದ್ಯುತ್ ಕಳಿಸುವುದು, ತೂತು ಕೊಳವೆಯಲ್ಲಿ ನೀರು ಹಾಯಿಸಿದ ಹಾಗೆ! ತಪ್ಪು ತಿಳಿಯಿತು. ಎಜ್ರ ಕಾರ್ನೆಲ್‌ಗೆ ಮನಸ್ಸಿನಲ್ಲೇ ಕೃತಜ್ಞತೆಗಳನ್ನು ಅರ್ಪಿಸಿದ. ಆದರೆ ಮುಂದೆ ಮತ್ತೆ ಕೇಬಲ್ ತಯಾರಿಸಲು ಹಣ-ವೇಳೆ ಎರಡೂ ಇಲ್ಲ.

ರಾತ್ರಿ ಎಲ್ಲ ಚಿಂತಿಸಿದ. ತನ್ನ ಹಳೆಯ ಕಡತಗಳನ್ನೆಲ್ಲಾ ತಿರುವಿ ಹಾಕಿದ. ಭೂಮಿಯ ಮೇಲೆ ಕಂಬಗಳನ್ನು ನೆಟ್ಟು ಒಂದರಿಂದ ಒಂದಕ್ಕೆ ಉದ್ದಕ್ಕೂ ತಂತಿ ಬಿಗಿಯಬಹುದು. ಹಾಗೆ ಮಾಡಿದರೆ, ತಂತಿಯ ಉದ್ದಕ್ಕೂ ಅವಾಹಕದ ಕವಚ ಬೇಕಿಲ್ಲ ಎಂದು ತಿಳಿಯಿತು. ಬರಿಯ ತಂತಿ ಇಟ್ಟುಕೊಂಡು ಕೆಲಸ

ಪ್ರಾರಂಭಿಸಬಹುದು. ಆದರೆ ಕಂಬಗಳಿಗೆ ತಂತಿ ಬಿಗಿಯುವಾಗ ಆವಾಹಕಬೇಕು. ಅಲ್ಲಲ್ಲಿ ಹೇಗೆ ಅದಕ್ಕೆ ಕವಚ ಹಾಕುವುದು? ಈ ಯೋಚನೆಗಳನ್ನೆಲ್ಲ, ತಿಳಿಯದೇ, ಬಹಿರಂಗವಾಗಿ ಮಾಡುತ್ತಿದ್ದ ಎಜ್ರ ಕಾರ್ನೆಲ್ ಎಲ್ಲ ಕೇಳಿಸಿಕೊಂಡು, "ಗಾಜಿನ ಬಿರುಡೆಗಳಾದಾವೆ?" ಎಂದು ಕೇಳಿದ. "ಎಷ್ಟು ಸಿಗಬಹುದು? ತುಂಬ ಬೇಕಲ್ಲ." 'ಓ ಅದಕ್ಕೇನು' ಎಂದು ಓಡಿದ. ಎಲ್ಲ ಬಡಗಿಗಳ ಅಂಗಡಿಗಳಿಗೂ ಹೋಗಿ, ಅವರು ಮರದ ಬೀರುಗಳಿಗೆ ಹಿಡಿಯಂತೆ ಹಾಕಲು ಮಾಡಿಟ್ಟುಕೊಂಡಿದ್ದ ಎಲ್ಲ ಬಿರುಡೆಗಳನ್ನು ಕೊಂಡು ತಂದುಬಿಟ್ಟ!

"ನೀನೇ ನನ್ನ ಗೆಳೆಯ ಎಜ್ರ ಕಾರ್ನೆಲ್" ಎಂದು ಪಿನ್ಲೆ ಅವನ ಕೈಹಿಡಿದು ವಂದನೆಗಳನ್ನು ಅರ್ಪಿಸಿದ.

ವಾರದಿಂದ ನಿದ್ರೆ ಇಲ್ಲದ ಫಿನ್ಲೆ ಮೋರ್ಸ್ ಅಂದು ರಾತ್ರಿ ನಿಶ್ಚಿಂತೆಯಿಂದ ನಿದ್ರೆ ಮಾಡಿದ.

ವಾಷಿಂಗ್ಟನ್ ಇಂದ ಬಾಲ್ಟಿಮೋರ್‌ಗೆ, 40 ಮೈಲಿಗಳ ಉದ್ದಕ್ಕೂ ಕಂಬಗಳು ಎದ್ದು ನಿಂತವು. ಒಂದರಿಂದ ಒಂದಕ್ಕೆ ತಂತಿಗಳನ್ನು ಗಾಜಿನ ಬಿರುಡೆಗಳ ಸಹಾಯದಿಂದ ಬಿಗಿದಿದ್ದರು. ಮಧ್ಯೆ ಮಧ್ಯೆ ಶಕ್ತಿವರ್ಧಕಗಳೂ ಇದ್ದವು. ಫಿನ್ಲೆ ಮೋರ್ಸ್ ಉದ್ದಕ್ಕೂ ಎಲ್ಲ ಕಂಬದ ಹತ್ತಿರವೂ ತನ್ನ ಪರೀಕ್ಷೆಗಳನ್ನು ಮುಗಿಸಿ ವಾಷಿಂಗ್ಟನ್ ಸುಪ್ರಿಂಕೋರ್ಟ್ ಕಟ್ಟಡದೊಳಕ್ಕೆ ಬರುತ್ತಿದ್ದ. ಹಾಗೇ, ಆ್ಯನಿ ತನ್ನ ಸಂದೇಶದೊಡನೆ ಹಾಜರಾದಾಳು. ಅವಳ ಆ ಸಂಭ್ರಮ, ಅವಳ ಉಡುಗೆ ತೊಡುಗೆಗಳನ್ನು ನೋಡಿ ಮೋರ್ಸ್‌ಗೆ ಆಶ್ಚರ್ಯವಾಯಿತು. ಯಾವುದಾದರೂ ನೃತ್ಯಕ್ಕೆ ಹೊರಟಿದ್ದಾಳೋ ಎಂದು ಸಂದೇಹವೂ ಬಂದಿತು. ಅಲ್ಲಿದ್ದ ಕೆಲಸಗಾರರೆಲ್ಲ ರಾತ್ರಿಯೆಲ್ಲ ಕೆಲಸಮಾಡಿ ಸೋತುಹೋಗಿದ್ದರು. ನಿದ್ರೆಯಿಲ್ಲದೆ ಎರಡು ಮೂರು

ರಾತ್ರಿಗಳನ್ನು ಕಳೆದಿದ್ದರು. ಎಲ್ಲರ ಮುಖದಲ್ಲೂ ಉದ್ವೇಗ ನಿರೀಕ್ಷೆ
ಗಳು ಇಣುಕುತ್ತಿದ್ದವು. ಫಿನ್ಲೆಗೆ ಎಷ್ಟು ವಿಶ್ವಾಸವಿತ್ತೋ, ಅಷ್ಟೇ
ಆತಂಕವೂ ಇತ್ತು!

ಲ್ಯಾನಿ ಓಡಿ ಬಂದು ತಾನು ಬರೆದುಕೊಂಡು ಬಂದ ಸಂದೇಶ
ವನ್ನು ಅವನ ಕೈಗೆ ಕೊಟ್ಟಳು.

"ಬಹಳ ಚೆನ್ನಾಗಿದೆ ಲ್ಯಾನಿ. ನನ್ನ ಪಕ್ಕದಲ್ಲಿಯೇ ಕುಳಿತಿರು.
ನಿನ್ನ ಸಂದೇಶವನ್ನು ಬಾಲ್ಟಿಮೋರ್‌ಗೆ ಕಳುಹಿಸುತ್ತೇನೆ."

ಸಮಯ ಸಮೀಪಿಸುತ್ತಿತ್ತು. ಕೋರ್ಟಿನ ಕೋಣೆಯು
ತುಂಬ ಜನ ತುಂಬಿದ್ದರು. ಸೂಜಿ ಬಿದ್ದರೂ ಕೇಳಿಸುವಷ್ಟು
ನಿಶ್ಶಬ್ದ. ಅವರೆಲ್ಲ ನಿರೀಕ್ಷಿಸುತ್ತಿದ್ದಂತೆ, ಫಿನ್ಲೆ ಮೋರ್ಸ್‌ನ
ಮುಂದಿದ್ದ ಯಂತ್ರ ಸದ್ದು ಮಾಡಿತು.

"ನನ್ನ ಗೆಳೆಯ ವೇಲ್, ಆಲ್ಫ್ರೆಡ್ ವೈಟ್, ಬಾಲ್ಟಿ
ಮೋರ್‌ನಲ್ಲಿ ತಯಾರಾಗಿ ಕುಳಿತಿದ್ದಾರೆ. ನಾನೀಗ ಈ ಸಂದೇಶ
ವನ್ನು ಅಲ್ಲಿಗೆ ಕಳುಹಿಸಿ, ಅದನ್ನೇ ಪುನಃ ಹಿಂದಕ್ಕೆ ಪಡೆಯು
ತ್ತೇನೆ. ಆಮೇಲೆ ಯಾರು ಬೇಕಾದರೂ ಸಂದೇಶಗಳನ್ನು ಕಳುಹಿಸ
ಬಹುದು." ತನ್ನ ಪುಟ್ಟ ಭಾಷಣವನ್ನು ಮುಗಿಸಿ, ಫಿನ್ಲೆ
ಮೋರ್ಸ್, ತನ್ನ ಸಂಕೇತ ಭಾಷೆಯಲ್ಲಿ ಸಂದೇಶವನ್ನು ಕಳುಹಿಸಿದ.
ಯಂತ್ರವನ್ನೇ ನೋಡುತ್ತ ಕುಳಿತಿದ್ದ ಲ್ಯಾನಿ, ಸಂದೇಶ ಬಾಲ್ಟಿ
ಮೋರ್‌ಗೆ ಹೋಗಿ ಬರಲಿ ಎಂದು ಕುರ್ಚಿಗೊರಗಿ ಕುಳಿತಳು.
ಇಲ್ಲಿ ಅವನ ಯಂತ್ರ ಆಗಲೇ ಕುಣಿಯಲು ಮೊದಲಿಟ್ಟಿತು.
ಒಂದೇ ನಿಮಿಷದಲ್ಲಿ ಅಲ್ಲಿಂದ ಸಂದೇಶ ಬರಲು ಆರಂಭಿಸಿಬಿಟ್ಟಿತು.
ಯಂತ್ರದ ಮುಂದೆ ಕಾಗದ, ಸಂಕೇತಗಳನ್ನು ಬರೆದುಕೊಳ್ಳುತ್ತ
ಚಲಿಸಿತು.

ಸಂಕೇತವನ್ನು ಭಾಷೆಗೆ ತರ್ಜುಮೆ ಮಾಡಿದರು. "ದೇವರು

ಎಂತಹ ಅದ್ಭುತಗಳನ್ನು ಮಾಡಿದ್ದಾನೆ" (What hath God Wrought).

ಬೆಳಕಿನ ವೇಗದಲ್ಲಿ ಬಾಲ್ಟಿಮೋರ್‌ಗೆ ಹೋಗಿಬಂದ ಸಂದೇಶ ಇದು.

ಅವನ ಹನ್ನೆರಡು ವರ್ಷಗಳ ಶ್ರಮ ಸಾರ್ಥಕವಾಯಿತು. ಆದರೆ, ಆ ಕ್ಷಣದಲ್ಲಿ, ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ದೊಡ್ಡದಾಗಿ ಕಾಣಲೇ ಇಲ್ಲ. ಅವನು ಪಟ್ಟ ಶ್ರಮ, ಅನುಭವಿಸಿದ ನೋವು, ಸೋಲು ಎಲ್ಲ ಮರೆತುಹೋಯಿತು ಜೀವನದಲ್ಲಿ ಕಳೆದ ಸಂತೋಷದ ದಿನಗಳನ್ನು ಮಾತ್ರ ನೆನೆಸಿಕೊಂಡ. ತನ್ನ ಪ್ರಯೋಗ ಮೊದಲ್ಗೊಂಡ ಹಡಗನ್ನೂ ಅದರ ನಾವಿಕನನ್ನೂ ನೆನೆಸಿಕೊಂಡ. ಅವನಿಗೆ ವಿದ್ಯುತ್ ಪಾಠವನ್ನು ಹೇಳಿದ ಗುರುಗಳನ್ನು ನೆನಸಿಕೊಂಡ.

ಗುಂಪು ಇನ್ನೂ ಹರ್ಷೋದ್ಗಾರ ಮಾಡುತ್ತಲೇ ಇತ್ತು. "ಈ ಘಳಿಗೆಯನ್ನು ನೆನಪಿಟ್ಟುಕೊಳ್ಳಬೇಕು–ಅಲ್ಲವೇ" ಆ್ಯನಿ ಹರ್ಷೋದ್ಗಾರಗಳ ನಡುವೆ ಹೇಳಿದ್ದು ಅವನಿಗೆ ಕೇಳಿಸಿತು.

"ಹೌದು ಆ್ಯನಿ–ಹೌದು ಇಟ್ಟ ಗುರಿ ತಲುಪಿದಾಗಲೇ, ದುಡಿಮೆ ಸಾರ್ಥಕವೆನಿಸುವುದು."

40 ಮೈಲಿಗಳನ್ನು ಕ್ಷಣದಲ್ಲಿ ಮುಂದಕ್ಕೂ ಹಿಂದಕ್ಕೂ ಕ್ರಮಿಸಿದ ಸಂಕೇತ, 400 4000 ಮೈಲಿಗಳನ್ನೂ ಕ್ಷಣದಲ್ಲಿ ಕ್ರಮಿಸಬಲ್ಲದು ಎಂದು ತಿಳಿದಾಗ ಅಲ್ಲಿ ನೆರೆದಿದ್ದ ಜನರ ಹರ್ಷ ಧ್ವನಿ ಗಗನಕ್ಕೇರಿತು.

ಕಲಾವಿದನ ಹೃದಯ ತೃಪ್ತಿಸಂತೋಷಗಳಿಂದ ತುಂಬಿತ್ತು. ಆಮೇಲೆ . . .

1851ರಲ್ಲಿ 50 ತಂತಿ ಜಾಲಗಳು ಅಮೆರಿಕದ ಸಂಯುಕ್ತ

ಸಂಸ್ಥಾನಗಳ ಉದ್ದಗಲಕ್ಕೂ ಹರಡಿತು. ಇನ್ನು ಹತ್ತುವರ್ಷ ಗಳಲ್ಲಿ ಅದು ಯೂರೋಪನ್ನೂ ಆಕ್ರಮಿಸಿತು. ಇಪ್ಪತ್ತು ವರ್ಷ ಗಳಲ್ಲಿ ಪ್ರಪಂಚದ ಆದ್ಯಂತ ತಂತಿಗಳ ಜಾಲ ಹರಡಿಕೊಂಡಿತು. ಒಂದು ಮೂಲೆಯಲ್ಲಿ ನಡೆದ ಘಟನೆ, ಯಾವ ಕಾಲವಿಳಂಬವೂ ಇಲ್ಲದೆ, ಜಗತ್ತಿನ ಇನ್ನೊಂದು ಮೂಲೆಯನ್ನು ತಲಪಿತು.

ತಂತಿಯ ಜಾಲಗಳನ್ನು ನೋಡಿದ ಫಿನ್ಲೆ ಬೆರಗಾದ. ತನ್ನ ಕೂಸು ಇಷ್ಟು ಬೇಗ, ತನ್ನ ಬುದ್ಧಿಗೆ ಸವಾಲು ಹಾಕುವಷ್ಟು ಬೆಳೆದದ್ದನ್ನು ಕಂಡು ಸಂತೋಷಪಟ್ಟ.

ಒಮ್ಮೆ ಟೆಲಿಗ್ರಾಫ್ ಕಛೇರಿಗೆ ಭೇಟಿಕೊಟ್ಟು, ತಂತಿಗಳ ಗೊಂದಲವನ್ನು ಕಂಡ ಕಲಾವಿದ ಕಣ್ಣು ಮುಚ್ಚಿ ಹಿಂತಿರುಗಿದ.

ಈಗ ಅವನಿಗೆ ಹಳೆಯ ನಿರಾಶೆ, ಕಷ್ಟ, ಉಪವಾಸಗಳನ್ನು ಮರೆಯುವಷ್ಟು ಹಣ ಸಿಕ್ಕಿತು. ಅವನ ಹಳೆಯ ಮನೆ ಈಗ 'ಮೋರ್ಸ್‌ಬಿಲ್ಡಿಂಗ್' ಆಯಿತು. ಒಂದು ಕಾಲದಲ್ಲಿ, ವಿದ್ಯಾರ್ಥಿ ಗಳಿಗೆ ಪಾಠಹೇಳಿ ದಿನ ಕಳೆಯುತ್ತಿದ್ದ ಮನೆಯಲ್ಲಿ ಇಂದು ಆರಾಮವಾಗಿ ಸಂತೋಷದಿಂದ ಕಾಲಕಳೆಯುತ್ತಿದ್ದ. ಅವನಿಗೆ ವ್ಯವಹಾರ ಬೇಕಿರಲಿಲ್ಲ. ಅಷ್ಟು ಹಣವೂ ಬೇಕಿರಲಿಲ್ಲ. ಆದರೆ ಹಣ ಅವನ ಕಡೆಗೇ ಹರಿದು ಬರುತ್ತಿತ್ತು. ವ್ಯವಹಾರವನ್ನೆಲ್ಲ ಎಜ್ರ ಕಾರ್ನೆಲ್ ನೋಡಿಕೊಳ್ಳುತ್ತಿದ್ದ. ಅವನ ಜೊತೆಗಾರ ವೇಲ್ ಸಂದೇಶವಾಹಕದ ಔನ್ನತ್ಯವನ್ನು ಗಮನಿಸಿಕೊಳ್ಳುತ್ತಿದ್ದ. ಅವನ ಕೋಣೆಯಲ್ಲಿ ಒಂದು ಟೆಲಿಗ್ರಾಫ್ ಉಪಕರಣವಿತ್ತು. ಅದರ ಮೂಲಕ ಗೆಳೆಯರೊಡನೆ ಎಂದಾದರೂ ಮಾತನಾಡಿ ಕೊಳ್ಳುತ್ತಿದ್ದ. ಉಳಿದ ಕಾಲವನ್ನೆಲ್ಲ ಚಿತ್ರಕಲೆಯ ವಿದ್ಯಾರ್ಥಿ ಗಳೊಡನೆ ಕಳೆಯುತ್ತಿದ್ದ.

ಅವನ 80ನೆಯ ಹುಟ್ಟುಹಬ್ಬದಂದು ನ್ಯೂಯಾರ್ಕಿನಲ್ಲಿ

ಒಂದು ದೊಡ್ಡ ಉತ್ಸವವೇ ಜರುಗಿತು. ಅಲ್ಲಿಯ ಒಂದು ಉದ್ಯಾನವನದಲ್ಲಿ, ಅವನ ಮೂರ್ತಿಯನ್ನು ಅನಾವರಣ ಮಾಡಿದರು. ತನ್ನ ದೇಶಬಾಂಧವರಿಗೆ, ತನ್ನ ಸಂಕೇತ ಭಾಷೆಯಲ್ಲಿ ಸಂದೇಶವನ್ನು ಕಳಿಸಿದ.*

81ನೆಯ ವಯಸ್ಸಿನಲ್ಲಿ ಇಡೀ ಪ್ರಪಂಚವನ್ನೇ ತಂತಿಗಳಿಂದ ಒಂದುಗೂಡಿಸಿದ ಜೀವ ಶಾಂತಿಯನ್ನರಸಿಕೊಂಡು ಹೋಯಿತು.

---

* ಇಂದು ಒಂದು ಕೊನೆಯಿಂದ ಇನ್ನೊಂದು ಕೊನೆಗೆ ನೇರವಾಗಿ ಅವರವರ ಭಾಷೆಯಲ್ಲಿಯೇ ಮಾತನಾಡಬಹುದು—ಇದು ದೂರವಾಣಿ.

ರೇಡಿಯೋ ಪ್ರಸಾರಕ, ಗ್ರಾಹಕಗಳಿಂದ, ತಂತಿ ಇಲ್ಲದೆ ಮಾತನಾಡಬಹುದು—ಇದು ನಿಸ್ತಂತಿ ಸಾಧಕ.

# ಮೋರ್ಸ್ ಸಂಕೇತ

| A | B | C | D | E | F |
|---|---|---|---|---|---|
| ·— | —··· | ·· · | —·· | · | ··— |
| G | H | I | J | K | L |
| ——· | ···· | ·· | —·—· | —·— | — |
| M | N | O | P | Q | R |
| —— | —· | · · | ····· | ··—· | · ·· |
| S | T | U | V | W | X |
| ··· | — | ··— | ···— | ·—— | ·—·· |
| Y | Z | | | | |
| ·· ·· | ···· | | | | |

ಅಂಕಿಗಳಿಗೆ

| 1 | 2 | 3 | 4 | 5 | 6 |
|---|---|---|---|---|---|
| ·——· | ··—·· | ···—· | ····— | ——— | ······ |
| 7 | 8 | 9 | 0 | | |
| ——·· | —···· | —··— | — | | |

ಚಿಹ್ನೆಗಳು

·—·— ಅಲ್ಪವಿರಾಮ ··· ·· ಅರ್ಧವಿರಾಮ

··——·· ವಿರಾಮ

—··—· ಪ್ರಶ್ನಾರ್ಥಕ

# ಮೋರ್ಸ್ ಕಳಿಸಿದ ಮೊದಲ ಸಂದೇಶ

.-- .... .- -

.... .- - ....

--. .. -..

.-- ... .. ..- --. .... -

..-.

W H A T

H A T H

G O D

W R O U G H T

?

ಈ ಸಂದೇಶವನ್ನು ಮೋರ್ಸ್ ಸಂಕೇತದ ಮೂಲಕ ಮೊಟ್ಟ ಮೊದಲನೆಯದಾಗಿ ಮೇ 24, 1844 ರಂದು ವಾಷಿಂಗ್‌ಟನ್‌ನಿಂದ ಬಾಲ್ಟಿಮೋರ್‌ಗೆ ಕಳುಹಿಸಲಾಯಿತು.

